# ಯಕ್ಷಗಾನ ಆಚಾರ್ಯ
# ಅರ್ಕುಳ ಸುಬ್ರಾಯ ಆಚಾರ್ಯ



ಕೆ. ಉಮೇಶ ಆಚಾರ್ಯ ಗೇರುಕಟ್ಟೆ



ಕನ್ನಡ ಸಂಘ ಕಾಂತಾವರ (ರಿ.)
'ನಾಡಿಗೆ ನಮಸ್ಕಾರ' ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ ಕುಸುಮ : ೧೦೨



'ನಾಡಿಗೆ ನಮಸ್ಕಾರ'
ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ
ಕುಸುಮ : ೧೦೨

# ಯಕ್ಷಗಾನ ಆಚಾರ್ಯ
# ಅರ್ಕುಳ ಸುಬ್ರಾಯ ಆಚಾರ್ಯ

ಕೆ. ಉಮೇಶ ಆಚಾರ್ಯ ಗೇರುಕಟ್ಟೆ

ಕನ್ನಡ ಸಂಘ ಕಾಂತಾವರ (ರಿ.)
ಕಾಂತಾವರ–೫೭೪ ೧೨೯
ಕಾರ್ಕಳ, ಉಡುಪಿ ಜಿಲ್ಲೆ

## ಅಧ್ಯಕ್ಷರ ಮಾತು

"ನಾಡಿಗೆ ನಮಸ್ಕಾರ" ಎನ್ನುವುದು ಕಾಂತಾವರ ಕನ್ನಡ ಸಂಘವು ಮೂವತ್ತಕ್ಕೆ ಕಾಲಿಟ್ಟದ್ದನ್ನು ನೆನಪಿಸುವ ಮತ್ತು ಗುರುತಿಸುವ ಗ್ರಂಥಮಾಲೆ. ಆ ಮಾಲೆಯ ಮೂಲಕ ಕನಿಷ್ಠ ಮೂವತ್ತು ಹೊತ್ತಗೆಗಳನ್ನಾದರೂ ಮುಂದಿನ ಮೂರು ವರುಷಗಳಲ್ಲಿ ತರಬೇಕೆನ್ನುವುದು ಆಗ ಇದ್ದ ಸಂಕಲ್ಪ.

ಈ ಮಾಲೆ ಯಾವ ವಿಚಾರಕ್ಕೆ ಒತ್ತುಕೊಡಬೇಕು ಎನ್ನುವಾಗ ಹೊಳೆದದ್ದು ಸಾಹಿತ್ಯಕ ಕೃತಿಗಳ ಬದಲು ಸಾಂಸ್ಕೃತಿಕ ಸ್ವರೂಪದ ಕೃತಿಗಳನ್ನು ಹೊರ ತಂದರೆ ಹೇಗೆ ಎನ್ನುವ ಕನಸು. ಅದು ಸುಸ್ವರೂಪ ಪಡೆದದ್ದು ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ವಿವಿಧ ಕ್ಷೇತ್ರಗಳ ಸಾಧಕರ ಸಾಧನೆಗಳನ್ನು ದಾಖಲಿಸಬೇಕು ಎಂದು. ಸಾಮಾಜಿಕ ನ್ಯಾಯಕ್ಕೆ ಒತ್ತುಕೊಟ್ಟು ನಾವು ನಮ್ಮ ಮಿತಿಗಳ ಒಳಗೆ ಮೂವತ್ತು ಸಾಧಕರನ್ನು ಪರಿಚಯಿಸಿದಾಗ. ಮುಂದೆ ಎದುರಾದದ್ದು ಆರ್ಥಿಕ ಸಂಕಷ್ಟ. ಆಗ ಈ ಮಾಲೆಯನ್ನು ಮುಂದುವರಿಸಬೇಕಾದರೆ ಪ್ರಾಯೋಜಕತ್ವದ ನೆರವು ಬೇಕೆಂಬ ಸತ್ಯದ ಅರಿವು. ಸಾರ್ವಜನಿಕರು ನಮ್ಮ ಜೊತೆ ಅರ್ಥವತ್ತಾಗಿ ಸ್ಪಂದಿಸಿದ್ದರಿಂದ ಮಾಲೆಯಲ್ಲಿ ನೂರು ಹೊತ್ತಗೆಗಳು ಅರಳಿದ್ದು ಸಂಘದ ಸೌಭಾಗ್ಯ. ನಾಡಿನ ಭಾಗ್ಯ.

ಸಂಘವು ನೂರು ಸಾಧಕರನ್ನು ಪರಿಚಯಿಸಿದರೂ ಪರಿಚಯಿಸದೇ ಇರುವವರ ಸಂಖ್ಯೆ ಇದರ ದುಪ್ಪಟ್ಟು ಇರಬಹುದಾದ್ದರಿಂದ ಈಗ ಮತ್ತೆ ಮಾಲೆಯನ್ನು ಮುಂದುವರಿಸುವ ಪ್ರಯತ್ನಕ್ಕೆ ಕೈ ಹಾಕಿದೆ. ಸಾರ್ವಜನಿಕರ ನೆರವು ಚಿಂತಕರ ಒಲವು ಇರುವಷ್ಟು ದಿನ ಮಾಲೆಯೂ ಚಿರಂತನ ಎನ್ನುವುದು ನಮ್ಮ ಭಾವ ಮತ್ತು ಸಂಘದ ಜೀವ.

ಮಾಲೆಯ ಮೊದಲ ನೂರು ಕೃತಿಗಳನ್ನು ಸಂಪಾದಿಸಲು ನೆರವಾದವರು ಹಿರಿಯ ಸಾಹಿತಿ ವಿ.ಗ. ನಾಯಕರು. ನೂರರ ನಂತರ ಹೊತ್ತಗೆಗಳಿಗೆ ಸಂಪಾದಕರಾಗಿ ಒದಗಿ ಬಂದವರು ನಾಡಿನ ಖ್ಯಾತ ಸಾಹಿತಿ ಡಾ. ಬಿ. ಜನಾರ್ದನ ಭಟ್ಟರು.

ಈ ಎಲ್ಲದರ ಯಶಸ್ಸಿಗೆ ನೆರವು ನೀಡಿದ ಲೇಖಕರ ಕೊಡುಗೆ ಬಹಳ ದೊಡ್ಡದು. ಆಯ್ಕೆ ಸಮಿತಿಯಲ್ಲಿದ್ದು ಸಹಕರಿಸಿದವರೂ ನಮಗೆ ಸದಾ ಮಾನ್ಯರು. ಹೊತ್ತಗೆಯ ಅಂದ ಚಂದಕ್ಕೆ ಕಾರಣರಾದವರು ಶ್ರೀ ಕಲ್ಲೂರು ನಾಗೇಶ ಮತ್ತು ಬಳಗದವರು. ಪ್ರಾಯೋಜಕರಾಗಿ ಒದಗಿಬಂದವರು ಮಾಲೆಯ ಮಹಾ ಪೋಷಕರೂ ಹೌದು, ನಾಡು ನಮಸ್ಕರಿಸಬೇಕಾದವರೂ ಹೌದು.

ಹೀಗೆ ನಾವು ಈ ಮಾಲೆಯ ಮೂಲಕ ನಾಡಿಗೆ ನಮಸ್ಕರಿಸಲು ಕಾರಣರಾದವರೆಲ್ಲ ಇನ್ನೊಂದು ಅರ್ಥದಲ್ಲಿ ನಾವು ನಮಸ್ಕರಿಸಬಹುದಾದ ಅರ್ಥವಂತರು. ಈ ಕಾರಣದಿಂದ 'ನಾಡಿಗೆ ನಮಸ್ಕಾರ' ಎನ್ನುವ ಮಾಲೆಗೆ ಸಾರ್ಥಕ್ಯ ಭಾವ ಇದ್ದರೆ, ಅದರ ಸಾಧನೆಗೆ ಧನ್ಯತೆ ನಮಗೂ ಒದಗಿಬಂದಿರುವುದು ನಮ್ಮ ಪಾಲಿನ ಸಂತೋಷ.

ಈ ಕೃತಿಯ ಪ್ರಕಟಣೆಯ ಬಗ್ಗೆ ವಿಶೇಷ ಮುತುವರ್ಜಿ ವಹಿಸಿದ ಬೆಂಗಳೂರಿನ ಶ್ರೀ ಪಣಕಜೆ ಶಾಮರಾಯ ಆಚಾರ್ ಅವರಿಗೆ ಸಂಘವು ಕೃತಜ್ಞತೆ ಸಲ್ಲಿಸುತ್ತದೆ.

೮ ಫೆಬ್ರವರಿ ೨೦೧೫ | ಡಾ. ನಾ. ಮೊಗಸಾಲೆ


**Yakshagana Acharya Arkula Subraya Acharya**
A monograph on the Life and Achievements of **Arkula Subraya Acharya**
written by **K. Umesh Acharya Gerukatte,** (Mob : 9481180340)
Edited by : **Dr. B. Janardana Bhat**, Belman (Mob : 9481145775)
Published by : **Kannada Sangha Kanthavara (R)**
P.O. Kanthavara - 574 129, Karkala, Udupi Dist.
Mobile : 9900701666, 9008978366
Email : kannadasanghakanthavara@gmail.com

Chief Editor
**Dr. Na. Mogasale**
President, Kannada Sangha Kanthavara (R)

First Impression : 2015 Size : demy 1/8 Paper : 70 GSM Maplitho
Pages : 52



Price : Rs. 45
Cover Design : **Kallur Nagesh**
Page Designed & Printed at : **Aakrithi Prints**
Light House Hill Road, Mangaluru - 575001
Tel.: 0824 2443002

ಪ್ರಧಾನ ಸಂಪಾದಕರು : **ಡಾ. ನಾ. ಮೊಗಸಾಲೆ,** ಅಧ್ಯಕ್ಷರು, ಕನ್ನಡ ಸಂಘ
ಸಂಪಾದಕರು : **ಡಾ. ಬಿ. ಜನಾರ್ದನ ಭಟ್,** ವಿಮರ್ಶಕರು, ಪ್ರಾಧ್ಯಾಪಕರು

ಸದಸ್ಯರು : ಪ್ರೊ. ಜಿ.ಆರ್.ರೈ, ಭಾರತೀಯ ವಿದ್ಯಾಭವನ, ಮಂಗಳೂರು
ಶ್ರೀ ವಿ.ಗ. ನಾಯಕ, ಹಿರಿಯ ಸಾಹಿತಿ, ವಿಮರ್ಶಕರು
ಶ್ರೀ ಬೆಳಗೋಡು ರಮೇಶ ಭಟ್, ಕವಿ, ಕಥೆಗಾರರು
ಶ್ರೀ ಯಶೋಧರ್ ಪಿ. ಕರ್ಕೇರ, ಅಧ್ಯಕ್ಷರು, ಅಲ್ಲಮಪ್ರಭು ಪೀಠ
ಶ್ರೀ ಕಲ್ಲೂರು ನಾಗೇಶ, ನಿರ್ದೇಶಕರು, ಅಲ್ಲಮಪ್ರಭು ಪೀಠ
ಶ್ರೀ ಸದಾನಂದ ನಾರಾವಿ, ಪ್ರಧಾನ ಕಾರ್ಯದರ್ಶಿ, ಕನ್ನಡ ಸಂಘ, ಕಾಂತಾವರ

ಅಧಿಕೃತ ಮಾರಾಟಗಾರರು : ಶ್ರೀರಾಮ ಪ್ರಕಾಶನ
ನಂ. ೯೩/ಡಿ, ೩ನೇ ಕ್ರಾಸ್
ಪೂರ್ವ ಬಡಾವಣೆ, ಚೆಲುವಯ್ಯ ಪಾರ್ಕ್
ನೆಹರು ನಗರ, ಮಂಡ್ಯ-೫೭೧೪೦೧
೯೪೪೯೩೦೧೭೩

## ಯಕ್ಷಗಾನ ಆಚಾರ್ಯ
# ಅರ್ಕುಳ ಸುಬ್ರಾಯ ಆಚಾರ್ಯ

### ಅಧ್ಯಾಯ : ಒಂದು

### ಸುಸಂಸ್ಕೃತ ಬದುಕಿನ ನೋಟ

**ಬಂಧುರವಾಕ್ಯದಿನಾ ಹರಿ**
**ಸಂಧಾನಮನೋವಿ ಕವಿ ಚಮತ್ಕಾರಕೆ ನಲ್ ।**
**ಸಂಧಿಸಿ ನೆಗಳ್ದಾ ಕಲೆಗೆಸು**
**ಸಂಧಿಯನಿತ್ತಂಗೆ ಬಿರುದನೇನಂ ಕುಡುವೋ ॥**

೧೯೩೦ ರ ಫೆಬ್ರವರಿ ೧ ಮತ್ತು ೨ರಂದು ಬೆಳ್ಳಾರೆಯ ಅಯ್ಯನಕಟ್ಟೆಯಲ್ಲಿ ಜರುಗಿದ ಎರಡು ದಿನಗಳ ಯಕ್ಷಗಾನ ಸಮ್ಮೇಳನದಲ್ಲಿ ಮೇಲಿನ ಪ್ರಶಂಸೆ ಸಂದದ್ದು ಅರ್ಕುಳ ಸುಬ್ರಾಯ ಆಚಾರ್ಯರಿಗೆ (೧೮೮೫–೧೯೪೫). ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದವರು ಘನವಿದ್ವಾಂಸರೂ, ಅಂದಿನ ಜಿಲ್ಲಾ ವಿದ್ಯಾಧಿಕಾರಿಗಳೂ, ೧೯೨೦ರಲ್ಲಿ ಮಂಗಳೂರಿನಲ್ಲಿ ಜರುಗಿದ ೧೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದ ಆರ್. ತಾತಾಚಾರ್ಯ ಎಂ.ಎ., ಎಲ್.ಟಿ. ಅವರು. ಅಂದು ಜರುಗಿದ ತಾಳಮದ್ದಳೆಯ ರಸಾಸ್ವಾದದಿಂದ ಆನಂದ ಪರವಶರಾದ ಅವರು ತಮ್ಮ ಪ್ರತಿಕ್ರಿಯೆಯನ್ನು ೧೬ ಕಂದ ಪದ್ಯಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಈ ೧೬ ಕಂದಪದ್ಯಗಳಲ್ಲಿ ಮೇಲೆ ಉದಾಹರಿಸಿದ ಪದ್ಯ ವಿಖ್ಯಾತ ಅರ್ಥಧಾರಿ, ಲೇಖಕ ಅರ್ಕುಳ ಸುಬ್ರಾಯ ಆಚಾರ್ಯರನ್ನು ಉದ್ದೇಶಿಸಿ ರಚಿತವಾದದ್ದು. ಅದಾಗಲೇ ೧೯೨೬ರಲ್ಲಿ 'ಕೃಷ್ಣ-ಸಂಧಾನ' ಯಕ್ಷಗಾನ ಪ್ರಸಂಗಕ್ಕೆ ಸೊಗಸಾದ ಅರ್ಥವಿವರಣೆಯನ್ನು ಬರೆದು ಪ್ರಕಟಿಸಿ ಖ್ಯಾತನಾಮರಾದ ಅರ್ಕುಳ ಸುಬ್ರಾಯ ಆಚಾರ್ಯರಿಗೆ ಯಾವ ಬಿರುದನ್ನು ಕೊಡುವುದು? ಎಂಬ ಉದ್ಗಾರ! ಅಂದೇ 'ಯಕ್ಷಗಾನ ಆಚಾರ್ಯ' ಎಂಬ ಬಿರುದನ್ನು ಪ್ರಶಸ್ತಿ ಪತ್ರದೊಡನೆ ಸಮ್ಮೇಳನದ ಅಧ್ಯಕ್ಷರಿಂದ ಕೊಡಲಾಯಿತು.

### ಬಾಲ್ಯ-ವಿದ್ಯಾಭ್ಯಾಸ

ಯಕ್ಷಗಾನ ಸಾಹಿತ್ಯದ ಮೊತ್ತಮೊದಲ ಅರ್ಥಸಹಿತ ಕೃತಿ ಎಂಬ ಅಗ್ಗಳಿಕೆ ಹೊಂದಿರುವ ಈಗಲೂ ಪ್ರಸ್ತುತವಾಗಿರುವ 'ಅರ್ಥ ಸಹಿತ ಕೃಷ್ಣಸಂಧಾನ' ಕೃತಿಯ ಕರ್ತೃ ಅರ್ಕುಳ ಸುಬ್ರಾಯ ಆಚಾರ್ಯರ ಜನನವಾದದ್ದು ದಿನಾಂಕ ೨೧-೦೬-೧೮೮೫ ರಂದು, ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ನರಿಮೊಗರು ಎಂಬ ಹಳ್ಳಿಯಲ್ಲಿ. ಅಲ್ಲಿ ಹುಲ್ಲು ಛಾವಣಿಯ ಮನೆಯಲ್ಲಿ ರಜತ, ಸ್ವರ್ಣ ಶಿಲ್ಪದ ಕುಲವೃತ್ತಿ ಮಾಡಿಕೊಂಡು ಜೀವಿಸುತ್ತಿದ್ದ



## ಸಂಪಾದಕೀಯ

ಕಾಂತಾವರ ಕನ್ನಡ ಸಂಘದ ಮಹತ್ವದ ಯೋಜನೆ 'ನಾಡಿಗೆ ನಮಸ್ಕಾರ' ಶತಮಾನೋತ್ತರ ಕೃತಿ ಮಾಲೆಯ ಸಂಪಾದಕತ್ವವನ್ನು ಕನ್ನಡ ಸಂಘದ ಅಧ್ಯಕ್ಷರಾದ ಡಾ. ನಾ. ಮೊಗಸಾಲೆಯವರು ನನಗೆ ವಹಿಸಿದ್ದಾರೆ. ಈಗಾಗಲೇ ನೂರು ಕೃತಿಗಳನ್ನು ಈ ಮಾಲೆಯಲ್ಲಿ ತಂದಿರುವುದರಿಂದ ಇದರ ಸ್ವರೂಪಕ್ಕೆ ಒಂದು ಖಾಚಿತ್ಯ ಬಂದಿದೆ.

ಒಂದು ಪ್ರದೇಶದ ಬದುಕು ಸುಸಂಸ್ಕೃತವೆನಿಸಿಕೊಳ್ಳಬೇಕಾದರೆ ಅಲ್ಲಿನ ಪ್ರತಿಭಾವಂತ ಪ್ರಜೆಗಳು ವಿವಿಧ ಕ್ಷೇತ್ರಗಳಲ್ಲಿ ಸಮಾಜದ ಒಳಿತಿಗಾಗಿ ದುಡಿಯಬೇಕಾಗುತ್ತದೆ. 'ಹೊಟ್ಟೆಯೇ ಕೇಂದ್ರವಾಗಿದೆ ನರನ ಜೀವಿತಕ್ಕೆ' ಎಂಬಂತಹ ಪರಿಸ್ಥಿತಿ ಇದ್ದಾಗ ಇಂತಹ ಸಂಸ್ಕೃತಿ ಬೆಳೆಯಲಾರದು. ಗ್ರೀಕ್ ಚಿಂತಕ ಲಾಂಜೈನಸ್‌ನ ವಿಚಾರಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು: ರಾಜ ಪ್ರಭುತ್ವದಡಿ ಸ್ವಾತಂತ್ರ್ಯ ಇಲ್ಲದ ಕಾರಣ ಪ್ರತಿಭೆ ಮುರುಟಿ ಹೋಗುತ್ತದೆ. ಪ್ರಜಾಪ್ರಭುತ್ವದಲ್ಲಿ ಸೃಷ್ಟಿಕಾರ್ಯ ಪ್ರಗತಿಪಥದಲ್ಲಿ ಸಾಗುತ್ತದೆ ಎನ್ನುವ ಮಾತುಗಳನ್ನು ಒಪ್ಪದೆ ಅವನು ಜನರ ನೈತಿಕ ಅಧಃಪತನದಲ್ಲಿ ಪ್ರತಿಭೆಯ ಅವನತಿ ಮತ್ತು ದುರ್ಗತಿಗೆ ಕಾರಣವನ್ನು ಗುರುತಿಸುತ್ತಾನೆ. ಧನಲೋಭ, ಭ್ರಷ್ಟಾಚಾರ, ಸುಖಲೋಲುಪತೆ, ಸ್ವಾರ್ಥಗಳ ಪರಿಣಾಮವಾಗಿ ಹುಟ್ಟಿಕೊಳ್ಳುವ ನಿರ್ಲಜ್ಜ ಮನೋವೃತ್ತಿ, ಆದರ್ಶ ವಿಮುಖತೆ ಇವುಗಳಿಂದಾಗಿ ಆತ್ಮಶಕ್ತಿ ಕುಗ್ಗಿಸಿಕೊಂಡ ಒಂದು ಜನಾಂಗದಲ್ಲಿ ಸಂಸ್ಕೃತಿ ದೊಡ್ಡದಾಗಿ ಬೆಳೆಯಲಾರದು ಎನ್ನುವುದು ಅವನ ಅಭಿಪ್ರಾಯ. ನಮ್ಮ ನಾಡಿನಲ್ಲಿ ಹಾಗಾಗದ ಹಾಗೆ ಸದಾ ಎಚ್ಚರವಾಗಿರಬೇಕಾದುದು ಅಗತ್ಯ. ಜನರಲ್ಲಿ ಆದರ್ಶಗಳನ್ನು ಬಿತ್ತಬೇಕಾದುದೂ ಅಗತ್ಯ. ಇಂತಹ ಮಹತ್ಕಾರ್ಯಕ್ಕೆ ಕಾಂತಾವರ ಕನ್ನಡ ಸಂಘ ತನ್ನ ಕಿಂಚಿತ್ ಕಾಣಿಕೆ ಸಲ್ಲಿಸುತ್ತಲೇ ಬಂದಿದೆ. 'ನಾಡಿಗೆ ನಮಸ್ಕಾರ' ಪುಸ್ತಕ ಮಾಲೆ ಅಂತಹ ಒಂದು ಕಾಣಿಕೆ.

ನಮ್ಮ ದಕ್ಷಿಣ ಕನ್ನಡ (ಉಡುಪಿ ಮತ್ತು ಕಾಸರಗೋಡು ಸೇರಿದ ಅವಿಭಜಿತ ಜಿಲ್ಲೆ) ಧಾರ್ಮಿಕ, ನೈತಿಕ, ಸಾಹಿತ್ಯಿಕ, ಸಾಂಸ್ಕೃತಿಕ ಅಧಃಪತನವಾಗದಂತೆ ಸದಾ ಎಚ್ಚರಿಕೆಯಿಂದಿರುವ ಒಂದು ನಾಡು. ಇಲ್ಲಿನ ಬಹುಮುಖೀ ಸಂಸ್ಕೃತಿಯ ನಿರ್ಮಾಣಕ್ಕಾಗಿ ದುಡಿದು ಕೀರ್ತಿಶೇಷರಾಗಿರುವ ಮತ್ತು ಈಗಲೂ ನಮ್ಮ ನಡುವೆ ಇರುವ ವಿದ್ವಾಂಸರು, ಚಿಂತಕರು, ಸಾಹಿತಿಗಳು, ಯಕ್ಷಗಾನ ಸಾಹಿತಿಗಳು ಹಾಗೂ ಕಲಾವಿದರು, ವರ್ಣಚಿತ್ರ ಕಲಾವಿದರು, ಶಿಲ್ಪಿಗಳು, ದಾರುಶಿಲ್ಪಿಗಳು, ವಿವಿಧ ಕ್ಷೇತ್ರಗಳನ್ನು ಪ್ರತಿನಿಧಿಸುವ ಸಮಾಜಸೇವಕರು, ಶಿಕ್ಷಕರು, ಅಭಿವೃದ್ಧಿಯ ಹರಿಕಾರರು, ಕೃಷಿ ಋಷಿಗಳು, ವೈದ್ಯರು ಮುಂತಾದವರ ಸಾಧನೆಗಳನ್ನು ದಾಖಲಿಸುವುದು ಸಮಾಜದ ಕರ್ತವ್ಯ. ಮುಂದೆ ಅಧ್ಯಯನ ಕಾರ್ಯಗಳನ್ನು ಕೈಗೊಳ್ಳುವವರಿಗೆ ಒಂದು ಮಾಹಿತಿ ಕೋಶವಾಗಿಯೂ ಈ ಮಾಲೆಯ ಪುಸ್ತಕಗಳು ಒದಗಿಬರಲಿವೆ.

ಖ್ಯಾತ ಯಕ್ಷಗಾನ ಚಿಂತಕ, ಅರ್ಥಧಾರಿ ಅರ್ಕುಳ ಸುಬ್ರಾಯ ಆಚಾರ್ಯರ ಕುರಿತಾದ ಈ ಕೃತಿಯನ್ನು ಬರೆದುಕೊಟ್ಟು ಮಾಲೆಯ ಮಹತ್ವವನ್ನು ಹೆಚ್ಚಿಸಿದ ಲೇಖಕ ಕೆ. ಉಮೇಶ ಆಚಾರ್ಯ ಗೇರುಕಟ್ಟೆ ಅವರಿಗೆ ಸಂಘವು ಋಣಿಯಾಗಿದೆ.

೮ ಫೆಬ್ರವರಿ ೨೦೧೫

**ಡಾ. ಬಿ. ಜನಾರ್ದನ ಭಟ್**

ಮಂಜಯ್ಯ ಆಚಾರ್ಯರು ಇವರ ಜನ್ಮದಾತ. ಶಿವಮ್ಮ ಈ ಕೂಸನ್ನು ಹೆತ್ತ ಪುಣ್ಯಗರ್ಭೆ. ಪಾರ್ಥಿವ-ನಾಮ ಸಂವತ್ಸರದ ಮಿಥುನ ಮಾಸ ದಿನ 7 ಸಲುವ ಒಂದು ರವಿವಾರ ಚಿತ್ರಾ ನಕ್ಷತ್ರದ ಎರಡನೆಯ ಪಾದದಲ್ಲಿ ಇವರು ಜನ್ಮ ತಳೆದರು. ರಾಶಿಚಕ್ರದಲ್ಲಿ ಶ್ರೇಷ್ಠವೆನಿಸಿದ ಸಿಂಹರಾಶಿಯೇ ಮಗುವಿನ ಜನ್ಮಲಗ್ನ. ಕನ್ಯೆಯಲ್ಲಿ ರಾಹು, ಮೀನಾದಲ್ಲಿ ಕೇತುವಿದ್ದು ಉಳಿದ ಎಲ್ಲ ಗ್ರಹಗಳು ಈ ಎರಡು ಗ್ರಹಗಳ ಮುಷ್ಟಿಯಲ್ಲಿ ಸಿಲುಕಿದ್ದರಿಂದ ಕಾಳಸರ್ಪಯೋಗ. ಅನ್ಯಗ್ರಹಗಳು ಒಳ್ಳೆಯ ಸ್ಥಾನದಲ್ಲಿದ್ದರೂ ಈ ದುರ್ಯೋಗ ಅವರ ಬಾಳನ್ನೆ ಬಡತನದಲ್ಲಿ ಬೇಯಿಸಿತು. ಹುಟ್ಟಿದ ಆರು ತಿಂಗಳಲ್ಲಿ ಸಂಸಾರದ ಜೀವನಾಧಾರನಾಗಿ ದುಡಿಯುತ್ತಿದ್ದ ತಂದೆ ತೀರಿಕೊಂಡರು. ಮುಂದಿನ ದಾರಿಯೇನೆಂಬ ವಿಚಾರ ಮನೆ ಮಂದಿಯನ್ನು ಕಾಡಿತು. ಶಿವಮ್ಮನ ಅಕ್ಕ ಅವರ ಜೊತೆಗಿದ್ದಳು. ಆಕೆ ಮಹಾ ಧೈರ್ಯಶಾಲಿನಿ. ತಂಗಿಯನ್ನು, ಮಗುವನ್ನು ಕರೆದುಕೊಂಡು ತನ್ನ ದೂರದ ಬಂಧು ಮಂಗಳೂರು ಸಮೀಪದ ಕಣ್ಣೂರು ಕೊರಗ ಆಚಾರ್ಯರ ಮನೆಗೆ ಬಂದಳು. ಕೊರಗ ಆಚಾರ್ಯರು ಉದಾರ ಮನಸ್ಸಿನಿಂದ ಆಶ್ರಯವಿತ್ತರು. ಆ ಕಾಲದಲ್ಲಿ ತನ್ನ ಸುಖವನ್ನು ಮಾತ್ರ ನೋಡಿಕೊಂಡು ಮೆರೆಯುವ ನಾಗರಿಕತೆ ಇನ್ನೂ ಬೇರು ಬಿಟ್ಟಿರಲಿಲ್ಲ. ಅವರು ಕುಲಕಸಬು ಮಾಡಿಕೊಂಡು ಸಂಪಾದಿಸುತ್ತಿದ್ದ ಜನಸಾಮಾನ್ಯ. ಈ ಬಂಧುಗಳಲ್ಲಿ ಮಗು ಬೆಳೆಯಿತು. ಅಕ್ಷರಾಭ್ಯಾಸ ಮಾಡಿಸಲು ದಾರಿಯೇನೆಂದು ಯೋಚಿಸಿ, ಅರ್ಕುಳದಲ್ಲಿ ಐಗಳ ಮಠವನ್ನು ನಡೆಸಿಕೊಂಡು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ ತಮ್ಮಣ್ಣ ಮಾಸ್ತರರನ್ನು ವಿಚಾರಿಸಿದರು. ಅವರು ಕಣ್ಣೂರಿನಲ್ಲಿಯೇ ವಾಸಿಸುತ್ತಿದ್ದ ತನ್ನ ತಮ್ಮನಿಗೆ ಓಲೆ ಬರೆದುಕೊಟ್ಟರು. ಅಲ್ಲಿ ಬಾಲಕನ ಅಕ್ಷರಾಭ್ಯಾಸ ಪ್ರಾರಂಭವಾಯಿತು.

ಆ ಕಾಲದಲ್ಲಿ ಈಗಿನ ಹಾಗೆ ಮಕ್ಕಳಿಗೆಂದೇ ಬರೆದ ಪುಸ್ತಕಗಳಿರಲಿಲ್ಲ. ಪ್ರಾಥಮಿಕ ಹಂತದಲ್ಲಿ ಭಾಷಾ ಪುಸ್ತಕವನ್ನು ಹೊರತುಪಡಿಸಿ ಉಳಿದ ವಿಷಯಗಳಿಗೆ ಪುಸ್ತಕಗಳು ಬಳಕೆಯಲ್ಲಿರಲಿಲ್ಲ. ಭಾಷಾ ಪುಸ್ತಕವನ್ನು ಖ್ಯಾತ ಸಾಹಿತಿಗಳು, ಬರಹಗಾರರು ಬರೆಯುತ್ತಿದ್ದರು. ಶಿಕ್ಷಣದಲ್ಲಿ ಅನುಕರಣೆಯೇ ಪ್ರಧಾನವಾಗಿತ್ತು. ಅಕ್ಷರಾಭ್ಯಾಸವಾದ ಮೇಲೆ ಭಾರತ, ರಾಮಾಯಣಗಳ ಕೆಲವು ಭಾಗದ ಪದ್ಯಗಳನ್ನು ಕಲಿಸುತ್ತಿದ್ದರು. ಅವುಗಳ ತಾತ್ಪರ್ಯವನ್ನು ಹೇಳಿಕೊಡಲಾಗುತ್ತಿತ್ತು. ಹುಡುಗನಿಗೂ ಕಲಿಕೆಯಲ್ಲಿ ಅತೀವ ಆಸಕ್ತಿ. ಪ್ರತಿದಿನವೂ ಐಗಳು ಕೊಟ್ಟ ಪಾಠಗಳನ್ನು ಮರುದಿನ ತಪ್ಪದೆ ಒಪ್ಪಿಸುತ್ತಿದ್ದ. ಈತನ ಪ್ರತಿಭೆಯನ್ನು ಗುರುತಿಸಿದ ಐಗಳು, ಮನೆಯವರನ್ನು ಕರೆಸಿ "ಈ ಹುಡುಗನಿಗೆ ಕಲಿಸಿಕೊಡುವ ವಿದ್ಯೆ ಇನ್ನು ನನ್ನಲ್ಲಿ ಉಳಿದಿಲ್ಲ. ಸಾಧ್ಯವಿದ್ದರೆ ನನ್ನ ಅಣ್ಣನ ಬಳಿಗೆ ಕರೆದುಕೊಂಡು ಹೋಗಿ" ಎಂದರಂತೆ. ಹೀಗಾಗಿ ಕಣ್ಣೂರಿನ ಬಿಡಾರ ಅರ್ಕುಳಕ್ಕೆ ಸ್ಥಳಾಂತರಗೊಂಡಿತು.

ತಮ್ಮಣ್ಣ ಮಾಸ್ತರರು ಆ ಕಾಲದಲ್ಲಿ ಅರ್ಕುಳದಲ್ಲಿ ಹೆಸರಾಂತ ಐಗಳು. ಮಹಾ ಅನುಭವಶಾಲಿಗಳು. ನಿಜ ಅರ್ಥದಲ್ಲಿ ಹುಡುಗನಿಗೆ ಒಳ್ಳೆಯ ಗುರು ದೊರಕಿದರು. ತಮ್ಮಣ್ಣ ಮಾಸ್ತರರಿಗೆ ಹುಡುಗನ ಪ್ರತಿಭೆಯನ್ನು ಗುರುತಿಸಲು ಹೆಚ್ಚು ಸಮಯ ಹಿಡಿಯಲಿಲ್ಲ. ಅವನ ಆಸಕ್ತಿಯ ಸಸಿಗೆ ನೀರೆರೆದು ಪೋಷಿಸಿದರು. ಇಲ್ಲಿ ಹುಡುಗನಿಗೆ ಒಳ್ಳೆಯ ಮಾರ್ಗದರ್ಶನವೂ, ಪರಿಸರವೂ ದೊರೆಯಿತು. ಆತನ ಮನಸ್ಸು ಕುಲವೃತ್ತಿಯ ಕಡೆಗೆ



ಹರಿಯದೆ ಭಾರತ, ರಾಮಾಯಣ ಮತ್ತು ಭಾಗವತ ಕಾವ್ಯಗಳಲ್ಲಿ ಪರಿಶ್ರಮ ಪಡೆಯುವ, ಅವುಗಳಲ್ಲಿರುವ ಪದ್ಯಗಳ ನಿಜವಾದ ಅರ್ಥವನ್ನು ತಿಳಿಯುವ ಕಡೆಗೆ ಹರಿಯಿತು. ಅದರಲ್ಲಿ ಪ್ರಾವೀಣ್ಯವನ್ನು ಗಳಿಸಿದ. ಜೊತೆಗೆ ಯಕ್ಷಗಾನ ಪ್ರಸಂಗಳಿಗೆ ಅರ್ಥ ಹೇಳುವುದನ್ನು ತಮ್ಮಣ್ಣ ಮಾಸ್ತರರು ಅಭ್ಯಾಸಮಾಡಿಸಿದರು.

ಕಾಲೋಚಿತ ಉಪನಯನ ಸಂಸ್ಕಾರ ನಡೆಯಿತು. ಬಾಲಕ ಸುಬ್ರಾಯ ಕ್ರಮೇಣ ಕುಲವೃತ್ತಿ ರಜತ, ಸ್ವರ್ಣಶಿಲ್ಪವನ್ನು ಕಲಿತ. ಕೊರಗ ಆಚಾರ್ಯರ ಪುತ್ರರಾದ ಅಚ್ಯುತ, ಸದಾಶಿವರೊಂದಿಗೆ ಸುಬ್ರಾಯನೂ ಕೆಲಸ ಮಾಡುತ್ತಾ ಆಶ್ರಯದಾತನಿಗೆ ನೆರವಾಗುತ್ತಿದ್ದ. ಚಿಕ್ಕ ವಯಸ್ಸಿನಲ್ಲಿಯೇ ಅಲ್ಲಲ್ಲಿ ಪುರಾಣವಾಚನ, ಯಕ್ಷಗಾನ ತಾಳಮದ್ದಳೆಗಳಿಗೆ ಸುಬ್ರಾಯನಿಗೆ ಆಮಂತ್ರಣ ಬರಲಾರಂಭವಾಯಿತು. ಹೀಗೆ ದಿನದಿಂದ ದಿನಕ್ಕೆ ಪ್ರವರ್ಧಮಾನನಾಗುತ್ತ ಜನಪ್ರಿಯತೆಯನ್ನು ಸಂಪಾದಿಸಿ 'ಮರಿವಿದ್ವಾಂಸ'ನೆಂದು ಮನ್ನಣೆಯನ್ನು ಪಡೆಯತೊಡಗಿದ. ಹೀಗೆ ಒಲವು ಪುರಾಣ, ಪ್ರವಚನ ಮತ್ತು ತಾಳಮದ್ದಳೆಗಳತ್ತ ವಾಲಿತು.

## ಪಂಚಾಯತ್ ಬೋರ್ಡ್ ಸದಸ್ಯತ್ವ

ಅರ್ಕುಳದಲ್ಲಿ ಒಂದು ಪಂಚಾಯತ್ ಬೋರ್ಡ್ ಇತ್ತು. ಅದರ ಆಡಳಿತಕ್ಕೆ ಒಳಪಟ್ಟ ಜನರ ಜಗಳಗಳನ್ನು ಬಗೆಹರಿಸಿ ನ್ಯಾಯ ತೀರ್ಮಾನ ಕೊಡುವುದೇ ಈ ಬೋರ್ಡಿನ ಅಧಿಕಾರ. ಸುಬ್ರಾಯ ಆಚಾರ್ಯರ ಜನಪ್ರಿಯತೆ ಮತ್ತು ವಿದ್ವತ್ತು ಅವರನ್ನು ಬೋರ್ಡಿನ ಸದಸ್ಯತನದ ಪೀಠಕ್ಕೇರಿಸಿತು. ಅಲ್ಲಿಯೂ ಆಚಾರ್ಯರು ಮಹಾ ಮೇಧಾವಿಯೆಂದೇ ಜನರಿಂದ ಹೊಗಳಿಸಿಕೊಂಡರು. ಎಂತಹ ತಕರಾರುಗಳೇ ಬೋರ್ಡಿನ ಮುಂದೆ ಬಂದರೂ 'ಸುಲಿದ ಬಾಳೆಯ ಹಣ್ಣಿನಂದದಿ' ಅವುಗಳನ್ನು ಇತ್ಯರ್ಥಮಾಡಿ ಎರಡು ಪಕ್ಷದವರನ್ನು ಪಂಚಾಯಿತಿಕೆಯಿಂದ ರಾಜಿಮಾಡಿಸಿ ಸಂತೋಷದಿಂದ ಮನೆಗೆ ಮರಳುವಂತೆ ಮಾಡುತ್ತಿದ್ದರು. ಇದರಿಂದ ಅವರ ಮನೆಗೆ ಅಕ್ಕಿ, ತರಕಾರಿಗಳು ಊರಮಂದಿಯಿಂದ ಕಾಣಿಕೆ ರೂಪದಲ್ಲಿ ಬರುತ್ತಿದ್ದವು.

ಆ ಕಾಲದಲ್ಲಿ ಹಳ್ಳಿಗಳಲ್ಲಿ ಗುಟುಕು ಜೀವವನ್ನು ಹಿಡಿದುಕೊಂಡು ಬದುಕಿದ್ದ ತಾಳಮದ್ದಳೆಗೆ ಆಚಾರ್ಯರ ಭಾರತ ಪ್ರವಚನವೇ ನಾಂದಿಯಾಯಿತು. ಯಕ್ಷಗಾನ ಕಲಾದೇವಿ ಕೈಬೀಸಿ ಕರೆದಳು. ಆಕೆಯ ಕರೆಗೆ ಓಗೊಟ್ಟು ತನ್ನನ್ನೇ ಅರ್ಪಣೆಗೈದರು. ಅವರ ಕಲಾಶಕ್ತಿಯ ಕಮಲ ಅರಳುತ್ತಾ, ತನ್ನ ಸೌರಭವನ್ನು ನಾಲ್ದೆಸೆಗೂ ಪಸರಿಸಿತು.

## ಗೃಹಸ್ಥ ಜೀವನಕ್ಕೆ ಪಾದಾರ್ಪಣ

ಪ್ರಾಯ ಪ್ರಬುದ್ಧರಾದ ಸುಬ್ರಾಯ ಆಚಾರ್ಯರು ಚತುರ್ಭುಜರಾದರು. ಕಾಸರಗೋಡು ತಾಲೂಕಿನ ಮುಳ್ಳೇರಿಯ ಸಮೀಪದ ಗೋಸಾಡ ಎಂಬಲ್ಲಿದ್ದ ಅಯ್ಯ ಆಚಾರ್ಯರ ಮಗಳು ಸೀತಮ್ಮ ಬಾಳಸಂಗಾತಿಯಾಗಿ ಬಂದರು. ಸುಬ್ರಾಯ ಆಚಾರ್ಯರ ಮಡದಿ ಚೊಚ್ಚಲ ಬಸುರಿಯಾದಾಗ ಕಣ್ಣೂರಿನಲ್ಲಿ ಸೀಮಂತ ಸಂಸ್ಕಾರ ಜರುಗಿಸಿ ಹೆರಿಗೆಗಾಗಿ ತವರುಮನೆಗೆ ಕಳುಹಿಸಿಕೊಟ್ಟರು. ಅಲ್ಲಿಯೇ ದಿನಾಂಕ ೧೧-೦೫-

೧೯೦೯ರಂದು ಪ್ರಥಮ ಪುತ್ರ ಭೋಜರಾಯನ ಜನನವಾಯಿತು. ಮಗನಿಗೆ ಒಂದು ವರ್ಷವಾದ ಬಳಿಕ ಬಂಧುಗಳೊಬ್ಬರು ಆಚಾರ್ಯರನ್ನು ಕೆಲಸಕ್ಕೆ ಮಂಗಳೂರಿಗೆ ಕರೆಸಿಕೊಂಡರು. ಆಚಾರ್ಯರು ತನ್ನ ಬಿಡಾರವನ್ನು ಕುಟುಂಬ ಸಹಿತ ಮಂಗಳೂರಿಗೆ (೧೯೧೦) ಸ್ಥಳಾಂತರಿಸಿದರು. ಮೊದಲಿಗೆ ಹಂಪನಕಟ್ಟೆ ಸಮೀಪದ 'ಗುಳಿಗಹಿತ್ಲು' ಎಂಬಲ್ಲಿ ಬಿಡಾರವಿತ್ತು. ಸ್ವಲ್ಪ ಸಮಯದಲ್ಲಿ ಕೆಲಸಕ್ಕೆ ಕರೆಸಿಕೊಂಡಿದ್ದ ಬಂಧುವೂ ಆಕಸ್ಮತ್ತಾಗಿ ತೀರಿಕೊಂಡರು. ಆ ಮನೆಯ ಜವಾಬ್ದಾರಿಯೂ ಆಚಾರ್ಯರ ಹೆಗಲಿಗೆ ಏರಿತು. ಆ ಬಳಿಕ ೧೯೧೪ರಲ್ಲಿ ಮಾರ್ಕೆಟ್‌ರೋಡಿನಲ್ಲಿದ್ದ ರುಕ್ಮಾಜಿರಾಯರ ಬಾಡಿಗೆ ಮನೆಯಲ್ಲಿ ವಾಸ್ತವ್ಯ ಮಾಡಿದರು.

ಹಿರಿಯ ಮಗ ಭೋಜರಾಯ ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಕಲಿತು ಶಿಕ್ಷಕನಾಗಿ ಬಜ್ಪೆ ಚರ್ಚ್ ಶಾಲೆ, ಮತ್ತು ಕದ್ರಿ ವಿದ್ಯಾಬೋಧಿನಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕನಾಗಿ ಸೇವೆ ಸಲ್ಲಿಸಿದ್ದರು. ಭೋಜರಾಯರು, ಖ್ಯಾತ ಅರ್ಥಧಾರಿ ಪ್ರೊ.ಎಂ.ಆರ್. ಶಾಸ್ತ್ರಿಗಳ ಸಹಪಾಠಿ ಹಾಗೂ ಅವರ ಜೊತೆಗೂಡಿ ಕದ್ರಿಯಲ್ಲಿ ಶ್ರೀ ಮಂಜುನಾಥೇಶ್ವರ ಯಕ್ಷಗಾನ ಸಂಘದ ಸ್ಥಾಪನೆ ಮಾಡಿ ಒಟ್ಟಾಗಿ ದುಡಿದವರು. ಆಚಾರ್ಯರಿಗೆ ಭೋಜರಾಯನಲ್ಲದೇ, ಲೇಖನಾಥ, ಜಯಕರ ಎಂಬ ಇಬ್ಬರು ಗಂಡು ಮಕ್ಕಳು. ಧರ್ಮಾವತಿ ಎಂಬ ಒಬ್ಬ ಮಗಳೂ ಇದ್ದರು. ಕಿರಿಯರಿಬ್ಬರು ಸ್ವರ್ಣಶಿಲ್ಪಿಗಳು. ಮಗಳನ್ನು ಮಾಣಿ ಸಮೀಪದ ಕುದುಂಬ್ಲಾಡಿ ನಾರಾಯಣ ಆಚಾರ್ಯರಿಗೆ ವಿವಾಹ ಮಾಡಿ ಕೊಟ್ಟಿದ್ದರು. ಆಚಾರ್ಯರು ಜೀವಿತದ ಕೊನೆಯಲ್ಲಿ ಬಿಡಾರವನ್ನು ಕರಂಗಲಪಾಡಿಯಿಂದ ಈಗಿನ ಸಿ.ವಿ. ನಾಯಕ್ ಹಾಲ್‌ನ ಬಳಿಯ ಒಂದು ಮನೆಗೆ ಬದಲಾವಣೆ ಮಾಡಿಕೊಂಡಿದ್ದರು. ಪ್ರಸ್ತುತ ೧೯೭೫ರಿಂದ ಅರ್ಕುಳರ ಕಿರಿಯ ಸೊಸೆ ಶಾರದಾ, ಮೊಮ್ಮಗ ಅರುಣ ಆಚಾರ್ಯ ಇವರು ಕದ್ರಿಕಂಬಳದಲ್ಲಿ ನೆಲೆಸಿದ್ದಾರೆ.

## ವೃತ್ತಿ–ಪ್ರವೃತ್ತಿಗಳ ಸಾಮಾಜಿಕ ಬದುಕು

ಅರ್ಕುಳರು ಸದಾ ಖಾದಿ ವಸ್ತ್ರಧಾರಿ; ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಚನಾತ್ಮಕವಾಗಿ ಭಾಗವಹಿಸಿದ ನಿಷ್ಠಾವಂತ ಕಾಂಗ್ರೆಸ್ ತತ್ವಾವಲಂಬಿ. ೧೯೨೦ ರ ದಶಕದಲ್ಲಿ ಇಡೀ ನಾಡಿನಲ್ಲಿ ಪ್ರಸಿದ್ಧರಾಗಿದ್ದ ದೇಶಭಕ್ತ ಕಾರ್ನಾಡು ಸದಾಶಿವರಾಯರು ಕೊಡಿಯಾಲ್‌ಬೈಲಿನಲ್ಲಿ ಸ್ಥಾಪಿಸಿದ್ದ 'ರಾಷ್ಟ್ರೀಯ ತಿಲಕ ಮಹಾ ವಿದ್ಯಾಲಯ'ದ ಪ್ರತಿಷ್ಠಿತ ಕನ್ನಡ ಪಂಡಿತ ಪದವಿಗೆ ನೇಮಕಗೊಂಡರು. ವಿದ್ಯೆ, ಸಂಪತ್ತು ಇವುಗಳಲ್ಲಿ ಹಿಂದುಳಿದಿದ್ದ ವಿಶ್ವಕರ್ಮ ಜನಾಂಗದಲ್ಲಿ ಆ ಕಾಲದಲ್ಲಿ ಅವರು ಏರಿದ ಎತ್ತರ, ಸಾಧನೆ ಗಮನಾರ್ಹವಾದುದು.

ತಮ್ಮಯ್ಯ ಮಾಸ್ತರರ ಶಿಷ್ಯನಾಗಿ ಪಡೆದ ಜ್ಞಾನ ಅನುಭವಗಳೇ ಸುಬ್ರಾಯ ಆಚಾರ್ಯರನ್ನು ತಿಲಕ ವಿದ್ಯಾಲಯಕ್ಕೆ ಕೊಂಡೊಯ್ದಿತು, ಆದರೆ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯದ ಪಾಠ ಹೇಳಲು ಇನ್ನೂ ಹೆಚ್ಚಿನ ಜ್ಞಾನ ಅಧ್ಯಯನಗಳು ಅಗತ್ಯವೆಂಬ ಅರಿವು ಮೂಡಿತು. ಈ ನಿಟ್ಟಿನಲ್ಲಿ ಸರಿಯಾದ ಮಾರ್ಗದರ್ಶನ ಪಡೆಯಲು ಗುರುವಿನ ಹುಡುಕಾಟದಲ್ಲಿದ್ದರು. ಸುದೈವವಶಾತ್ ಅವರಿಗೆ ಸರಕಾರಿ ಕಾಲೇಜು ಮಂಗಳೂರಿನಲ್ಲಿ ಕನ್ನಡ ಪ್ರಾಧ್ಯಾಪಕರೂ, ಕನ್ನಡ–ಸಂಸ್ಕೃತಗಳ ಘನ ವಿದ್ವಾಂಸರಾಗಿದ್ದ ಪಂಡಿತ ಸಾಬಾಜಿ ಶ್ರೀನಿವಾಸರಾಚಾರ್ಯರ



ಪರಿಚಯವಾಯಿತು. ಸಾಬಾಜಿಯವರು ತಾಳಮದ್ದಳೆಗಳಲ್ಲಿ ಅರ್ಥವನ್ನು ಹೇಳುತ್ತಿದ್ದರು. ಸಾಹಿತ್ಯ ಅಧ್ಯಯನಕ್ಕಾಗಿ ಸಾಬಾಜಿಯವರನ್ನು ಆಶ್ರಯಿಸಿದರು. ಸಾಬಾಜಿ ಯವರು ಸಂತೋಷದಿಂದ ಆಚಾರ್ಯರಿಗೆ ಬೇಕಾದ ಮಾರ್ಗದರ್ಶನ ನೀಡಿದರು. ಜೊತೆಗೆ ಸಂಸ್ಕೃತ ಭಾಷಾಜ್ಞಾನಕ್ಕೆ ಗಣಪತಿ ಹೈಸ್ಕೂಲಿನ ಸಂಸ್ಕೃತ ಪಂಡಿತ ಕಲ್ಲಜೆ ಗೋಪಾಲಕೃಷ್ಣ ಶಾಸ್ತ್ರಿಗಳಿಂದ ಪಾಠಹೇಳಿಸಿಕೊಳ್ಳುತ್ತಿದ್ದರು. ಸಂಸ್ಕೃತ ಸಾಹಿತ್ಯದಲ್ಲೂ ತಕ್ಕಷ್ಟು ಪರಿಣತಿಯನ್ನು ಹೊಂದಿದರು. ಜೀವನದುದ್ದಕ್ಕೂ ಅಧ್ಯಯನಶೀಲ ಪ್ರವೃತ್ತಿಯನ್ನು ಉಳಿಸಿಕೊಂಡರು.

ತಿಲಕ ವಿದ್ಯಾಲಯದಲ್ಲಿ ಖ್ಯಾತ ಸಾಹಿತಿ ಕವಿ ಪತ್ರಕರ್ತ ಕಡೆಂಗೋಡ್ಲು ಶಂಕರ ಭಟ್ಟರು, ಮೂಡುಬಿದಿರೆ ಉಮೇಶರಾಯರು, ಅರೆಬೈಲು ಭೋಜರಾಯರು, ಡಿ.ಕೆ. ಭಾರದ್ವಾಜರು, ಪದ್ಮನೂರು ರಾಮಚಂದ್ರರಾಯರೇ ಮೊದಲಾದ ಮಹನೀಯರು ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ವಿದ್ಯಾಲಯದ ಅಧ್ಯಾಪಕರು, ವಿದ್ಯಾರ್ಥಿಗಳು ಮುಷ್ಟಿ ಅಕ್ಕಿ ಸಂಗ್ರಹಿಸಬೇಕಾಗಿತ್ತು. ಖಾದಿ ಮಾರಾಟ ಮಾಡಬೇಕಾಗಿತ್ತು. ೧೯೨೦–೩೦ರ ದಶಕವು ದೇಶದ ಇತಿಹಾಸದಲ್ಲಿ ಸ್ವದೇಶಿ ಚಳುವಳಿಯ ಕಾಲ. ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಶಾಲೆ, ಕಾಲೇಜು ಬಿಟ್ಟ, ತರಗತಿ ನಷ್ಟವಾದ ವಿದ್ಯಾರ್ಥಿಗಳು ಈ ವಿದ್ಯಾಲಯದಲ್ಲಿ ವಿದ್ಯಾರ್ಜನೆ ಮುಂದುವರಿಸುತ್ತಿದ್ದರು. ಸ್ವತಃ ಸದಾಶಿವರಾಯರೇ ಬ್ರಿಟಿಷರ ಒಡೆತನದಲ್ಲಿದ್ದ ಆಂಗ್ಲ ಭಾಷಾ ಮಾಧ್ಯಮದ ಶಾಲೆಯಲ್ಲಿ ಓದುತ್ತಿದ್ದ ತನ್ನ ಮಕ್ಕಳ ಓದನ್ನು ಬಿಡಿಸಿ ಈ ವಿದ್ಯಾಲಯಕ್ಕೆ ದಾಖಲು ಮಾಡಿಸಿದ್ದರು. ಜಾತಿ–ಮತ, ಬಡವ–ಶ್ರೀಮಂತರೆಂಬ ಭೇದವಿಲ್ಲದೆ ಸಮಾಜದ ಎಲ್ಲ ವರ್ಗದವರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ತಿಲಕ ವಿದ್ಯಾಲಯಕ್ಕೆ ಸೇರಿಸಿದ್ದರು. ಹೀಗೆ ವಿದ್ಯಾರ್ಥಿಗಳಿಂದ ವಿದ್ಯಾಲಯ ತುಂಬಿ ತುಳುಕುತ್ತಿತ್ತು. ಇಲ್ಲಿ ಅಧ್ಯಾಪನ ಮಾಡುತ್ತಿರುವಾಗ ಆಚಾರ್ಯರ ಸಾರ್ವಜನಿಕ ಸಂಪರ್ಕದ ಹರವು ವಿಸ್ತಾರಗೊಂಡಿತು. ಕಾರ್ನಾಡ್ ಸದಾಶಿವರಾಯರ ಒಡನಾಟದಿಂದ ಸ್ವಾತಂತ್ರ್ಯದ ಚಳವಳಿಯಲ್ಲಿ ದುಡಿಯುತ್ತಿದ್ದ ಅನೇಕ ಪ್ರಮುಖರ ಸಂಪರ್ಕ ಉಂಟಾಯಿತು. ಪರಿಣಾಮವಾಗಿ ಭಾರತೀಯರೆಲ್ಲರೂ ಸಮಾನರು, ಸ್ವತಂತ್ರರಾಗಿ ತಮ್ಮ ಏಳಿಗೆಯನ್ನು ಸಾಧಿಸುವ ಹಕ್ಕುಳ್ಳವರು ಎಂಬ ಮನಃಪ್ರವೃತ್ತಿ ಅವರಲ್ಲಿ ಬೆಳೆಯಿತು. ಕಾರ್ನಾಡರ ಪ್ರಭಾವದಿಂದ ಅನ್ಯಾಯದ ವಿರುದ್ಧ ಪ್ರತಿಭಟಿಸುವ ಆತ್ಮವಿಶ್ವಾಸ ಮೂಡಿತು. ಮುಂದೆ ಈ ಮನೋಭಾವವೇ 'ರಾಷ್ಟ್ರೀಯ ವಿಶ್ವಬ್ರಾಹ್ಮಣ ಸಮಾಜೋದ್ಧಾರಕಸಭಾ'ದ (RVS) ಹುಟ್ಟಿಗೆ ಪ್ರೇರಣೆಯಾಯಿತು.

೧೯೨೦ರ ದಶಕದಲ್ಲಿ ಮಂಗಳೂರಿನಲ್ಲಿ ಪ್ಲೇಗು ರೋಗ ತಲೆದೋರಿ ನೂರಾರು ಜನರನ್ನು ಬಲಿ ತೆಗೆದುಕೊಂಡಿತು. ಬಾಡಿಗೆ ಮನೆಯ ಮಾಲಕ ರುಕ್ಮಾಜಿರಾಯರು ಆ ಮಹಾಮಾರಿಗೆ ತುತ್ತಾದರು. ಹೀಗಾಗಿ ಮಾರ್ಕೆಟ್‌ರೋಡ್‌ನಲ್ಲಿದ್ದ ಬಿಡಾರವನ್ನು ತ್ಯಜಿಸಿ, ಕೊಡಿಯಾಲ್‌ಬೈಲ್ 'ಸ್ಯಾಬರಹಿತ್ತಲು'ಎಂಬಲ್ಲಿ ಬಾಡಿಗೆಗೆ ಮನೆ ಮಾಡಿದರು. ಅಷ್ಟರಲ್ಲಿ ಆಚಾರ್ಯರು ಅರ್ಥಗಾರಿಕೆ ಹಾಗೂ ಪುರಾಣಪ್ರವಚನ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದ್ದರು.

## ಜ್ಞಾನಸತ್ರ

ಅವರ ಮನೆ ಜ್ಞಾನಸತ್ರದ ಕೇಂದ್ರವಾಗಿತ್ತು. ವೃತ್ತಿಯಲ್ಲಿ ಕೃಷಿಕರಾಗಿದ್ದ ಅರ್ಥಧಾರಿ

ಶೆಡ್ಡೆ ಕೃಷ್ಣ ಮಲ್ಲಿಯವರು ಆಚಾರ್ಯರ ಮನೆಯಲ್ಲಿ ೧೯೨೫ ರಿಂದ ಮೂರು ವರ್ಷಗಳ ಕಾಲ ಹಳೆಗನ್ನಡ ಗದ್ಯ ಪದ್ಯ ಕಾವ್ಯಗಳ ಪಾಠ ಹೇಳಿಸಿಕೊಂಡಿದ್ದರು. ಮುಂದಕ್ಕೆ ಮಲ್ಲಿಯವರು ಶ್ರೇಷ್ಠ ಮಟ್ಟದ ಅರ್ಥಧಾರಿ, ಕನ್ನಡ ತುಳು ಪ್ರವಚನಕಾರರಾಗಿ ಐದು ದಶಕಗಳ ಕಾಲ (೧೯೩೦–೧೯೮೦) ಸೇವೆಗೈದವರು. ಗಂಡು ಗತ್ತಿನ ಮಾತುಗಾರಿಕೆಯ ಇವರ ಪ್ರಸಿದ್ಧ ಪಾತ್ರಗಳು ಜರಾಸಂಧ, ಕೌರವ, ವಾಲಿ, ಶಲ್ಯ, ಕರ್ಣ, ಭೀಮ, ಸುಧನ್ವ, ಅರ್ಜುನ, ಲಕ್ಷ್ಮಣ ಮೊದಲಾದವು. ತುಳುಭಾಷಾ ಪ್ರವಚನದಲ್ಲಿ ಇವರನ್ನು ಬಿಟ್ಟರೆ ಅನ್ಯರು ಇಲ್ಲವೆಂಬಷ್ಟು ಎತ್ತರದ ಸಿದ್ಧಿ. ನಾರಾಯಣ ಕಿಲ್ಲೆ – ಮಲ್ಲಿಯವರ ಅಂಗದ – ಪ್ರಹಸ್ತ, ಕರ್ಣ – ಶಲ್ಯ, ಕೃಷ್ಣ – ಕೌರವ ಇವು ಅಂದಿನ ಮೋಡಿ ಮಾಡಿದ ಜೋಡಿ ಪಾತ್ರಗಳು. ('ಒಡ್ಡೋಲಗ')

ಪ್ರಸಿದ್ಧರ ತಾಳಮದ್ದಳೆಗಳಲ್ಲಿ ಸ್ತ್ರೀಪಾತ್ರ ನಿರ್ವಹಿಸುವ ಅರ್ಥಧಾರಿಗಳ ಸಂಖ್ಯೆ ಬೆರಳೆಣಿಕೆಯದು. ಅಂತಹ ಸ್ತ್ರೀ ಪಾತ್ರಗಳ ಅರ್ಥಗಾರಿಕೆಯಲ್ಲಿ ಪ್ರಸಿದ್ಧರಾದವರು ಬೊಂಡಾಲ ಜನಾರ್ದನ ಶೆಟ್ಟರು. ವೃತ್ತಿಯಲ್ಲಿ ಅಧ್ಯಾಪಕರು. ಕೈಕೇಯಿ, ಸುಭದ್ರೆ, ರುಕ್ಮಿಣಿ, ತಾರೆ, ದ್ರೌಪದಿಯೇ, ಮೊದಲಾದ ಸ್ತ್ರೀ ಪಾತ್ರಗಳ ನಿರ್ವಹಣೆಯಲ್ಲಿ ಪ್ರಖ್ಯಾತರು. ಕೃಷ್ಣ, ಧರ್ಮರಾಯ, ಸಂಜಯ ಮೊದಲಾದ ಸೌಮ್ಯ ಪಾತ್ರಗಳಿಗೂ ಕೂಡ ಅರ್ಥ ಹೇಳುತ್ತಿದ್ದವರು. ಸಂಜಯ ರಾಯಭಾರದ 'ಸಂಜಯ' ಇವರಿಗೆ ಖ್ಯಾತಿಯನ್ನು ತಂದಿತ್ತ ಪಾತ್ರವೆಂದು ಹಿರಿ ತಲೆಮಾರಿನವರು ಈಗಲೂ ಸ್ಮರಿಸುತ್ತಾರೆ. ಗುರುವಪ್ಪ ಮಾಸ್ತರು, ತ್ಯಾಂಪಣ್ಣ ಶೆಟ್ಟರು ಹಾಗೂ ದೆಮ್ಮಲೆ ಗುತ್ತು ರಾಮಣ್ಣ ಶೆಟ್ಟರು–ಇವರೆಲ್ಲ ತಾಳಮದ್ದಳೆ, ಪ್ರವಚನ ಕ್ಷೇತ್ರದಲ್ಲಿ ಹೆಸರು ಮಾಡಿದ ಅರ್ಕುಳರ ಶಿಷ್ಯವೃಂದ. ಅವರ ಮನೆಯಲ್ಲಿ ದೇಶಭಕ್ತ ನಾರಾಯಣ ಕಿಲ್ಲೆ, ಪ್ರೊ. ಎಂ.ಆರ್. ಶಾಸ್ತ್ರಿಗಳು, ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟ ಮೊದಲಾದ ಪ್ರಸಿದ್ಧರು ಯಕ್ಷಗಾನ ಪಾತ್ರಗಳ ಚಿತ್ರಣ, ಪ್ರಾಚೀನ ಕನ್ನಡ ಕಾವ್ಯಗಳ ವಿಮರ್ಶೆ, ವಿಚಾರ ವಿನಿಮಯ ನಡೆಸುತ್ತಿದ್ದರು.

## ತಾಳಮದ್ದಳೆಯ ಖ್ಯಾತ ಅರ್ಥಧಾರಿ

ಖಾದಿಯ ಧೋತರವನ್ನುಟ್ಟು, ಮೊಣಕಾಲವರೆಗೆ ಇಳಿಯುವ ಖಾದಿಯ ಅಂಗಿಯನ್ನು ತೊಟ್ಟು, ಖಾದಿಯ ಟೋಪಿಯನ್ನಿಟ್ಟು, ಖಾದಿಯ ಶಾಲು ಧರಿಸಿ, ಹಣೆಯಲ್ಲಿ ವಿಭೂತಿ, ಗಂಧ, ಕುಂಕುಮದ ತಿಲಕ, ಕಿವಿಯಲ್ಲಿ ವಜ್ರದ ಒಂಟಿ, ಬೆರಳಲ್ಲಿ ವಜ್ರದ ಉಂಗುರ, ಅಂಗಿಗೆ ಚಿನ್ನದ ಗುಂಡಿ–ಇವುಗಳನ್ನೆಲ್ಲ ಧರಿಸಿಕೊಂಡು ತುಟಿಯ ಮೇಲೆ ಮೋರೆಯ ಮೆರಗು ಹೆಚ್ಚಿಸುವ ಮೀಸೆಯಿಂದ ಒಪ್ಪುವ ಶಾಂತ ಗಂಭೀರ ವರ್ಚಸ್ಸಿನ ಸುಂದರ ರೂಪಿಯಾದ ಸುಬ್ರಾಯ ಆಚಾರ್ಯರು ಯಕ್ಷಗಾನ ತಾಳಮದ್ದಳೆಯ ವೇದಿಕೆಗಳಲ್ಲಿ ಶೋಭಾಯಮಾನವಾಗಿ ಕಾಣಿಸುತ್ತಿದ್ದರು. ಭಾಗವತರಿಗೆ ಹತ್ತಿರವಾಗಿ ಪದ್ಮಾಸನ ಬಲಿದು ಕುಳಿತಿರುತ್ತಿದ್ದರು. ತಮ್ಮ ಪಾಲಿನ ಅರ್ಥಕ್ಕೆ ಸಂಬಂಧಿಸಿದ ಪದ್ಯಗಳನ್ನು ಭಾಗವತರು ಹಾಡುವಾಗ ಅವರು ಶ್ರುತಿ ಕೂಡಿಸುತ್ತಿದ್ದರು. ಶ್ರುತಿಬದ್ಧವಾಗಿ ಅರ್ಥ ಹೇಳುವುದು ರಂಜನೆಗೆ ಅನುಕೂಲ, ಮಾತ್ರವಲ್ಲ, ಅರ್ಥ ಹೇಳುವವರಿಗೂ ಆಯಾಸ ಕಡಿಮೆ ಎಂದು ಅವರು ನಂಬಿದ್ದರು. ಉಳಿದವರೂ ಅದನ್ನು ಅನುಸರಿಸುವಂತೆ ಉಪದೇಶಿಸುತ್ತಿದ್ದರು. ತಾಳಮದ್ದಳೆ ಕೂಟಗಳ ವೇದಿಕೆಯಲ್ಲಿ ಸಹಕಲಾವಿದರು–ಅಭ್ಯಾಸಿ ಕಿರಿಯರಿರಲಿ ಪ್ರಸಿದ್ಧರಿರಲಿ–ಅವರ ಅರ್ಥಗಾರಿಕೆಯನ್ನು



ಮುಗುಳುನಗೆ ಬೀರಿ ತಲೆಯಲ್ಲಾಡಿಸುತ್ತಾ ಮೆಚ್ಚುಗೆ ವ್ಯಕ್ತಪಡಿಸಿ ಪ್ರೋತ್ಸಾಹಿಸುತ್ತಿದ್ದರು.

ಅವರು ಕೊನೆಯ ಬಾರಿ ಅರ್ಥ ಹೇಳಿದ್ದು ಅರ್ಕುಳದ ಶ್ರೀ ವರದೇಶ್ವರ ದೇವಸ್ಥಾನದಲ್ಲಿ (೧೯೪೪ರಲ್ಲಿ). ಅಂದಿನ ಪ್ರಸಂಗ 'ಅತಿಕಾಯ ಕಾಳಗ'. ಸುಬ್ರಾಯ ಆಚಾರ್ಯರದು ಅತಿಕಾಯನ ಪಾತ್ರ, ಅವರ ಮೆಚ್ಚಿನ ಶಿಷ್ಯ ಶೆಡ್ಡೆ ಕೃಷ್ಣ ಮಲ್ಲಿಯವರದು ಲಕ್ಷ್ಮಣನ ಪಾತ್ರ. ಅತಿಕಾಯನ 'ಆತ್ಮನಿವೇದನೆ' ಹೃದಯಂಗಮವಾಗಿತ್ತು – ಎಂದು ಅವರ ಬಾಲ್ಯದ ಒಡನಾಡಿ ದಾಸರಗುಡ್ಡೆ (ನಂದಾವರ) ಸದಾಶಿವ ಆಚಾರ್ಯರು ಸ್ಮರಿಸುತ್ತಾರೆ.



ಶರವು ಯಕ್ಷಗಾನ ಸಂಘ, ೧೯೩೭

ಕುಳಿತವರು : ದಿ. ಮಹಾಬಲ ನೋಂಡರು, ದಿ. ಅರ್ಕುಳ ಸುಬ್ರಾಯ ಆಚಾರ್ಯರು, ದಿ. ನಿಡ್ಲೋಡಿ ಅನಂತ ಉಪಾಧ್ಯಾಯರು, ದಿ. ಕುಬಣೂರು ಬಾಲಕೃಷ್ಣರಾಯರು, ದಿ. ನಾರಾಯಣ ಕಿಲ್ಲೆಯವರು, ದಿ. ಪೊಳಲಿ ಶಂಕರನಾರಾಯಣ ಶಾಸ್ತ್ರಿಗಳು

ನಿಂತವರು : ಶ್ರೀ ಕೆ. ಸುಬ್ಬರಾಯರು, ಶ್ರೀ ಶರವು ರಾಮಕೃಷ್ಣ ಶಾಸ್ತ್ರಿಗಳು, ಶ್ರೀ ದೇಶಮಂಗಲ ಕೃಷ್ಣಯ್ಯ ಕಾರಂತರು

ಆಚಾರ್ಯರು ಕೊನೆಯ ದಿನಗಳು ಕರುಣಾಜನಕವಾಗಿತ್ತು. ಅವರ ಮರಣಕ್ಕೆ ಕೆಲವು ತಿಂಗಳ ಹಿಂದೆ, ಕೂಟದಲ್ಲಿ ಅಲ್ಪ ಕಾರಣಕ್ಕಾಗಿ ವಿರಸವುಂಟಾಗಿ ಕಲಾವಿದರೊಳಗಿದ್ದ ಅನ್ಯೋನ್ಯ ಬಾಂಧವ್ಯದಲ್ಲಿ ಬಿರುಕು ಉಂಟಾಗಿತ್ತು. ಈ ವಿರಸವು ಆಚಾರ್ಯರ ವೈರಾಗ್ಯಕ್ಕೆ ಕಾರಣವಾಯಿತು. ಯಕ್ಷಗಾನದ ಏಕಮಾತ್ರ ತಂತುವನ್ನೇ ಹಿಡಿದುಕೊಂಡು ನೇತಾಡುತ್ತಿದ್ದ ಜೀವಕ್ಕೆ ಆಧಾರವೇ ಕಡಿದು ಹೋದ ಮೇಲೆ ಬದುಕುವ ಆಸೆ ಕಮರಿಹೋಯಿತು. 'ನಿರಶನ ವ್ರತ'ವನ್ನು ಅಂಗೀಕರಿಸಿದರು. ೧೯೪೫ನೆಯ ಜನವರಿ ತಾರೀಕು ೩ ರಂದು ಅರವತ್ತನೆಯ ವಯಸ್ಸಿನಲ್ಲಿ, ಯಕ್ಷಗಾನ ಕಲಾಸರಸ್ವತಿಯ ಧೀಮಂತ ಪುತ್ರ ಸ್ವರ್ಗಸ್ಥರಾದರು.

## ವಿಶ್ವಕರ್ಮ ಸಮಾಜದ ಸೇವೆ

ಆಚಾರ್ಯರು, ಮಂಗಳೂರಿನ ವಿಶ್ವಬ್ರಾಹ್ಮಣ ಸಂಘದ 'ಕಾರ್ಯದರ್ಶಿ'ಯಾಗಿ ದಶಕದಷ್ಟು ದೀರ್ಘಕಾಲ (೧೯೨೧-೧೯೩೧) ಸೇವೆಸಲ್ಲಿಸಿದ್ದರು. ತಾನು ಹುಟ್ಟಿ ಬೆಳೆದ ವಿಶ್ವಕರ್ಮ ಸಮಾಜದ ಸೇವೆಯನ್ನು, ಭಕ್ತಿ-ಶ್ರದ್ಧೆಗಳಿಂದ ನಂಬಿಕೊಂಡು ಬಂದ ಮಂಗಳೂರಿನ ಶ್ರೀ ಕಾಳಿಕಾಂಬಾ ದೇವಸ್ಥಾನದ ಸೇವೆಯನ್ನು ಜೀವಮಾನವಿಡೀ ಶುದ್ಧಾಂತಃಕರಣದಿಂದ ಮಾಡುತ್ತಿದ್ದರು. ಬಡತನದಿಂದಾಗಿ ಬದುಕು ಕಷ್ಟಕರವಾಗಿದ್ದರೂ ಅದು ಅವರ ಉನ್ನತ ಕಾರ್ಯಗಳಿಗೆ ತೊಡಕಾಗಲಿಲ್ಲ. ದೇವಸ್ಥಾನದ ವ್ಯವಹಾರಗಳಲ್ಲಿ, ಸಮಾಜದ ಕಾರ್ಯಗಳಲ್ಲಿ ಭಿನ್ನಾಭಿಪ್ರಾಯಗಳು, ಸಂಘರ್ಷಗಳು, ತಲೆದೋರಿದಾಗ ವಕೀಲರಾದ ಕುಬಣೂರು ಬಾಲಕೃಷ್ಣರಾಯರು, ನಾರಾಯಣ ಕಿಲ್ಲೆಯವರನ್ನು ಕರೆಸಿ ಅವುಗಳನ್ನು ಬಗೆಹರಿಸುತ್ತಿದ್ದರು.

ಆ ಕಾಲದಲ್ಲಿ ಮಂಗಳೂರಿನ ಕಾಳಿಕಾಂಬಾ ದೇವಸ್ಥಾನದಲ್ಲಿ 'ಪೇಟೆಯವರಿಗೆ' ಮೊದಲ ಮರ್ಯಾದೆ, 'ಗ್ರಾಮದವರಿಗೆ' ಅನಂತರದ ಮರ್ಯಾದೆ ಕೊಡುತ್ತಿದ್ದರು. ಇದರಿಂದ ಶ್ರೇಷ್ಠರು, ಕನಿಷ್ಠರು, ಎಂಬ ತಾರತಮ್ಯ ಉಂಟಾಗಿತ್ತು. ರಾಷ್ಟ್ರೀಯ ಚಳುವಳಿಯ ಸಂಪರ್ಕದಿಂದ ಸಮಾನತೆಯ ಮನೋಭಾವವನ್ನು ಬೆಳೆಯಿಸಿಕೊಂಡಿದ್ದ ಆಚಾರ್ಯರಿಗೆ ಇದರಿಂದ ತುಂಬಾ ಮನೋವೇದನೆ ಉಂಟಾಗಿತ್ತು. ಸಮಾಜದ ಮುಂದಾಳುಗಳ ಮನವೊಲಿಸಿ ವಿಶ್ವಕರ್ಮ ಸಮಾಜದೊಳಗಿನ ಈ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಆದರೂ ಸಫಲವಾಗಲಿಲ್ಲ. ಆಗ ಆಚಾರ್ಯರು ಇಂತಹ ಉಚ್ಚ-ನೀಚ ವ್ಯವಸ್ಥೆ ದೂರವಾಗು ವವರೆಗೆ ಗ್ರಾಮದವರು ದೇವಸ್ಥಾನಕ್ಕೆ ಹಣ ಕೊಡಬಾರದೆಂದು ಕರೆ ನೀಡಿದರು. ಹಾಗೂ ಇದೇ ಅಭಿಪ್ರಾಯವುಳ್ಳ ಕೆಲವರ ಸಹಕಾರದಿಂದ 'ರಾಷ್ಟ್ರೀಯ ವಿಶ್ವಬ್ರಾಹ್ಮಣ ಸಮಾಜೋ ದ್ಧಾರಕ ಸಭಾ' (RVS) ಎಂಬ ಸಂಸ್ಥೆಯನ್ನು ೧೯೨೧ರಲ್ಲಿ ಸ್ಥಾಪಿಸಿ ೧೯೩೨ರಲ್ಲಿ ರಿಜಿಸ್ಟರ್ (ರಿಜಿಸ್ತ್ರಿ ನಂಬ್ರ ೧/೧೯೩೧-೩೨) ಮಾಡಿಸಿದರು. ಆಗ ಅದಕ್ಕೆ ಒಂದು ಶಾಶ್ವತ ಸ್ವರೂಪ ಬಂದಿತ್ತು. ತಮ್ಮ ಮನೆಯಲ್ಲೇ ಸಭಾದ ಕಚೇರಿ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಅದರ ಪ್ರಮುಖರ ಸಭೆಗಳು ಮಾರ್ಕೆಟ್ ರೋಡ್‌ನಲ್ಲಿದ್ದ ಆಚಾರ್ಯರ ಮನೆಯಲ್ಲಿ ಜರುಗುತ್ತಿದ್ದವು. ಸಭಾದ ನಡವಳಿಗಳು ಪತ್ರವ್ಯವಹಾರ, ಲೆಕ್ಕಪತ್ರ, ಮಾಸಿಕಪತ್ರಿಕೆ ಇವೆಲ್ಲವು ಕಾರ್ಯದರ್ಶಿಗಳಾಗಿದ್ದ ಆಚಾರ್ಯರ ಹೆಸರಿನಲ್ಲಿ ಕೆನರಾ ಛಾಪಖಾನೆಯಲ್ಲಿ ಮುದ್ರಿತವಾಗಿ ಪ್ರಕಟಗೊಳ್ಳುತ್ತಿದ್ದವು.

'ಖಡ್ಗಕ್ಕಿಂತ ಲೇಖನಿ ಹರಿತ' ಎನ್ನುವ ಮಾತು ಆಚಾರ್ಯರ ಬರವಣಿಗೆಗೆ ಚೆನ್ನಾಗಿ ಅನ್ವಯಿಸುತ್ತದೆ. ವೇದ, ಉಪನಿಷತ್ತು, ನೀತಿಶತಕ ಹಾಗೂ ಪ್ರಾಚೀನ ಕಾವ್ಯಗಳ ನುಡಿಮುತ್ತುಗಳನ್ನು ಉಲ್ಲೇಖಿಸಿ ಸಮಾಜೋದ್ಧಾರಕ್ಕೆ 'ಸಂಘಶಕ್ತಿ'ಯ ಅಗತ್ಯವನ್ನು ಪ್ರತಿಪಾದಿಸುವ, ಜಡರನ್ನು ಬಡಿದೆಬ್ಬಿಸುವ ಅವರ ಧಾರ್ಮಿಕ ಲೇಖನಗಳು, ಅನ್ಯ ಸಮಾಜ ಬಾಂಧವರ ಪ್ರಶಂಸೆಗೂ ಪಾತ್ರವಾಗಿತ್ತು. ಅವು ಸಾಹಿತ್ಯಕ ಮೌಲ್ಯವುಳ್ಳ ಅಪೂರ್ವ ದಾಖಲೆಗಳೂ ಆಗಿವೆ. ಸಭಾದ ಕಾರ್ಯದರ್ಶಿಯಾಗಿ ಅವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಅದರ ೧೨ನೇ ವಾರ್ಷಿಕ ಮಹಾಸಭೆಯು ದಿನಾಂಕ ೦೩-೦೪-೧೯೩೩ ರಂದು - "ಈ



ನಮ್ಮ ಸಂಘದ ಹೆಸರು ಆಚಂದ್ರಾರ್ಕ ಪರ್ಯಂತವಾಗಿ ನಿಲ್ಲುವಂತೆ ಸಂಘವನ್ನು ಸ್ಥಾಪಿಸಿದ ಸಂಘದ ಮೂಲಪುರುಷರಾದ ಶ್ರೀ ಅರ್ಕುಳ ಸುಬ್ರಾಯಾಚಾರ್ಯರ ಭಾವಚಿತ್ರವನ್ನು ತಯಾರಿಸಿ ಸಂಘದ ಮಂದಿರದಲ್ಲಿ ಇರಗೊಡಿಸುವುದು" ಎಂಬ ನಿರ್ಣಯವನ್ನು ಕೈಗೊಂಡಿರುವುದು ಗಮನಾರ್ಹವಾಗಿದೆ. ಆಚಾರ್ಯರ ಸಮಾಜ ಸೇವೆಯ ಕಾಯಕವನ್ನು ಮೆಚ್ಚಿ ವಿಶ್ವಕರ್ಮ ಸಮಾಜಕ್ಕೆ ಏಳಿಗೆಯನ್ನು ಜಗದಂಬಿಕೆ ಅನುಗ್ರಹಿಸಲಿಯೆಂದು, ಅಭಿನಂದನೆಗಳೊಂದಿಗೆ ೨೬ ಕಂದ ಪದ್ಯಗಳನ್ನು ವಿರಚಿಸಿ ಅದನ್ನು ಈ ವಾರ್ಷಿಕ ಮಹಾಸಭೆಗೆ ಕವಿ ಭೂಷಣ ವೆಂಕಪ್ಪ ಶೆಟ್ಟರು ಸಮರ್ಪಿಸಿದ್ದರು, ಎನ್ನುವುದೂ ಉಲ್ಲೇಖನೀಯವಾಗಿದೆ.

ಮುಂದೆ ಈ ಸಂಸ್ಥೆ ವಿಶಾಲವಾಗಿ ಬೆಳೆದು ವಿಶ್ವಕರ್ಮ ಸಮಾಜದ ಸಂಘಟನೆ, ಏಳಿಗೆಗೆ ತುಂಬಾ ರಚನಾತ್ಮಕ ಕೆಲಸಗಳನ್ನು ಮಾಡಿತು.ಇಂದಿಗೂ ಸಮಾಜದ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ವಿದ್ಯಾರ್ಥಿಗಳ ಉನ್ನತ ವಿದ್ಯಾಭ್ಯಾಸಕ್ಕೆ ವಿದ್ಯಾರ್ಥಿವೇತನವನ್ನು ನೀಡಿ ಪ್ರೋತ್ಸಾಹಿಸುತ್ತಿದೆ. ಅಮೂಲ್ಯ ಸಾಹಿತ್ಯ, ಧಾರ್ಮಿಕ ಗ್ರಂಥಗಳ ಪ್ರಕಟನೆಯನ್ನು ಮಾಡಿದೆ. ಪ್ರಮುಖವಾಗಿ 'ವಾಲ್ಮೀಕಿ ರಾಮಾಯಣ' ವಿಮರ್ಶೆ (೧೯೭೨, ಲೇ: ಪ್ರೊ. ಉ. ಕಾ. ಸುಬ್ಬರಾಯ ಆಚಾರ್), ವಿಶ್ವಬ್ರಹ್ಮ ಕುಲೋತ್ಸವ ೧ ರಿಂದ ೧೦ ಸಂಪುಟಗಳು (೧೯೭೫, ಲೇ: ಬ್ರಹ್ಮಶ್ರೀ ಬಾಳಶಾಸ್ತ್ರಿ, ರಾವಜೀ ಶಾಸ್ತ್ರಿ, ಕ್ಷೀರಸಾಗರ ಶಾಸ್ತ್ರಿ), ರಾಜ್ಯಮಟ್ಟದ ವಿಶ್ವಕರ್ಮ ಸಮ್ಮೇಳನ (೧೯೭೨ ಅದರ ಸ್ಮರಣ ಸಂಚಿಕೆ 'ಶಿಲ್ಪಿ') - ಇವುಗಳು ಪ್ರಮುಖವಾದವು. ೧೯೨೧ ರಲ್ಲಿ ಆಚಾರ್ಯರ ಮುತುವರ್ಜಿಯಿಂದ ಆರಂಭವಾದ ಈ ಸಂಸ್ಥೆಯು ಒಂಭತ್ತು ದಶಕಗಳಷ್ಟು ಪುರಾತನವಾದರೂ ಸಮಾಜಮುಖಿ ಕಾರ್ಯಗಳಲ್ಲಿ ನಿರತವಾಗಿದ್ದು ಈಗಲೂ ಸಕ್ರಿಯವಾಗಿರುವುದು ಅಭಿಮಾನಾಸ್ಪದವಾಗಿದೆ.

## ಸಮಾಜಸೇವೆ

ಬಡತನವಿದ್ದರೂ ಆಚಾರ್ಯರು ತಮ್ಮಿಂದಾಗುವ ಸಹಾಯವನ್ನು ಸಮಾಜಕ್ಕೆ ನೀಡುತ್ತಿದ್ದರು. ಒಂದು ಉದಾಹರಣೆಯೆಂದರೆ, ಹಳೇನೇರೆಂಕಿ ಸಮೀಪದ ಪಾಳೇರು ಹೊನ್ನಪ್ಪ ಆಚಾರ್ಯ ಎಂಬವರಿಗೆ ಮಂಗಳೂರಿನ ಶಿಕ್ಷಕ ತರಬೇತಿ ಕೇಂದ್ರದಲ್ಲಿ ವಿದ್ಯಾರ್ಜನೆ ಮಾಡಲು ೧೯೨೫ ರಲ್ಲಿ ಎರಡು ವರ್ಷ ಆಶ್ರಯವಿತ್ತು ಪ್ರೋತ್ಸಾಹಿಸಿದ್ದರು. ಹಾಗೂ ಅವರನ್ನು ವಿಶ್ವಕರ್ಮ ಸಮಾಜದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಮತ್ತು ವಿಶ್ವಬ್ರಾಹ್ಮಣ ಸಂಘದ ವಾರ್ಷಿಕೋತ್ಸವ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿಕೊಟ್ಟು ಸಮಾಜ ಸೇವೆಯಲ್ಲಿ ಪಾಲ್ಗೊಳ್ಳಲು ಹುರಿದುಂಬಿಸಿದ್ದರು. ಅವರನ್ನು ನಿವೃತ್ತ ಅಧ್ಯಾಪಕ ಪಾಳೇರು ಹೊನ್ನಪ್ಪ ಆಚಾರ್ಯರು ಸದಾ ಸ್ಮರಿಸುತ್ತಾರೆ.

ಅಧ್ಯಾಯ : ಎರಡು

# ಯಕ್ಷಗಾನದ ಆಚಾರ್ಯಪುರುಷ

## ಯಕ್ಷಗಾನ ಅರ್ಥಗಾರಿಕೆಯ ಶಿಕ್ಷಕ ಹಾಗೂ ಕೃತಿ ರಚನಾಕಾರ

ಕೊಡಿಯಾಲ್‌ಬೈಲ್ ಶಿಕ್ಷಕರ ತರಬೇತಿ ಸಂಸ್ಥೆಯ ಮುಖ್ಯೋಪಾಧ್ಯಾಯರಾದ ಉಳ್ಳಾಲ ಮಂಗೇಶರಾಯರು ಮತ್ತು ಆರ್. ತಾತಾಚಾರ್ಯ ಎಂಬ ಯಕ್ಷಗಾನಪ್ರಿಯ ವಿದ್ವಾಂಸರ ನೇತೃತ್ವದಲ್ಲಿ ಸಾಂಪ್ರದಾಯಿಕ ಯಕ್ಷಗಾನದ ಪುನರುಜ್ಜೀವನಕ್ಕೆ–ಸುಧಾರಣೆಗೆ 'ಯಕ್ಷಗಾನೋಜ್ಜೀವಿನಿ ಸಭಾ' ಎಂಬ ಸಂಸ್ಥೆ ೧೯೨೫ರಲ್ಲಿ ಉದಯಿಸಿತು. ಹಿರಿಯ ಬಲಿಪ ನಾರಾಯಣ ಭಾಗವತರು, ಮದ್ದಳೆಗಾರ ಕದ್ರಿ ಕಿಟ್ಟಣ್ಣನವರು, ಪಂಡಿತ ಮುಳಿಯ ತಿಮ್ಮಪ್ಪಯ್ಯನವರು, ಕೆ.ಪಿ.ವೆಂಕಪ್ಪ ಶೆಟ್ಟರು, ಹಾಗೂ ಬಡಗುತಿಟ್ಟಿನ ಪ್ರಸಿದ್ಧ ಯಕ್ಷಗಾನ ಕಲಾವಿದರೊಂದಿಗೆ ಸುಬ್ರಾಯ ಆಚಾರ್ಯರೂ ಅದರ ಪ್ರಮುಖ ಸದಸ್ಯರಾಗಿ ಸೇವೆ ಸಲ್ಲಿಸಿದರು.

ಆ ಶಾಲೆಯಲ್ಲಿ ತರಬೇತಿ ಪಡೆದು ಶಿಕ್ಷಕರಾಗಬಯಸುವ ವಿದ್ಯಾರ್ಥಿಗಳಿಗೆ ತಾಳಮದ್ದಳೆ ಅರ್ಥಗಾರಿಕೆಯಲ್ಲಿ ತರಬೇತಿ–ಮಾರ್ಗದರ್ಶನ ಕೊಡಲು ಮಂಗೇಶರಾಯರು, ಆಚಾರ್ಯರನ್ನೇ ಕರೆದರು. ಹೀಗೆ ತರಬೇತಿ ನೀಡುವುದಕ್ಕಾಗಿ ತಾವು ತಯಾರಿಸಿದ ಟಿಪ್ಪಣಿಗಳನ್ನು ಮುಂದೆ 'ಅರ್ಥ ಸಹಿತ ಕೃಷ್ಣ ಸಂಧಾನ' ಎಂಬ ಕೃತಿಯ ರೂಪದಲ್ಲಿ ಪ್ರಕಟಪಡಿಸಿದರು. ಅರ್ಥಗಾರಿಕೆಗೆ ಒಂದು ಶಿಕ್ಷಣ ವ್ಯವಸ್ಥೆ ಹಾಗೂ ಆಶುಭಾಷಣ ರೂಪದ ಅರ್ಥಗಾರಿಕೆಯನ್ನು ಬರಹ ರೂಪದಲ್ಲಿ ಪ್ರಕಟಿಸುವ ಸಾಹಸದ ಕೆಲಸವನ್ನು ಮೊತ್ತ ಮೊದಲು ೧೯೨೬ರಲ್ಲಿ ಸುಬ್ರಾಯ ಆಚಾರ್ಯರೇ ಆರಂಭಿಸಿದರು. ಅದು, ೧೯೨೬ರಿಂದ ೧೯೮೮ರ ತನಕ ನಾಲ್ಕು ಮುದ್ರಣಗಳನ್ನು ಕಂಡ ಜನಪ್ರಿಯ ಕೃತಿ. ಇತರ ಯಾವುದೇ ಅರ್ಥಸಹಿತ ಪ್ರಸಂಗ ಕೃತಿಗಳಿಗೆ ಇಂತಹ ಅವಕಾಶ ದೊರೆತಿಲ್ಲ ಎಂಬುದೇ ಅದರ ಹಿರಿಮೆ.

## 'ಅರ್ಥ ಸಹಿತ ಕೃಷ್ಣಸಂಧಾನ'ದ ಮೊದಲ ಮುದ್ರಣದಲ್ಲಿ ಆಚಾರ್ಯರ ವಿಜ್ಞಾಪನೆ

ಅರ್ಕುಳ ಸುಬ್ರಾಯ ಆಚಾರ್ಯರು 'ಅರ್ಥಸಹಿತ ಕೃಷ್ಣ ಸಂಧಾನ' ಕೃತಿಯ ಮೊದಲ ಮುದ್ರಣಕ್ಕೆ ಬರೆದ 'ವಿಜ್ಞಾಪನೆ' ಎಂಬ ಶೀರ್ಷಿಕೆಯ ಪ್ರಸ್ತಾವನೆಯು ಅವರು ಈ ಕಲೆಯ ಬಗ್ಗೆ ಹೊಂದಿದ್ದ ವಿಮರ್ಶನ ಪ್ರಜ್ಞೆಗೆ ಸಾಕ್ಷಿಯಾಗಿದೆ. ಅವರ ಮಾತುಗಳಲ್ಲಿಯೇ ಅದನ್ನಿಲ್ಲಿ ಉದ್ಧರಿಸಲಾಗಿದೆ:

'ಯಕ್ಷಗಾನ ಪ್ರಸಂಗ'ವು ಅತಿ ಸುಲಭವಾಗಿ ಸರ್ವರಿಗೂ ಅರ್ಥ ವಿವರಣೆಯಾಗ ಬಹುದಾಗಿರುತ್ತಾ, ಈ ಪ್ರಬಂಧಕ್ಕೆ ಅರ್ಥಸಮೇತ ಬರೆಯುವ ಪ್ರಯತ್ನಗೊಂಡ ಈ ಕಾರ್ಯವು ಸಾಮಾನ್ಯತರವಾದದ್ದೆಂದು ವಾಚಕ ಮಹಾಶಯರ ಯೋಚನೆಗೆ ಬಾರದೆ ಇರಲಿಕ್ಕಿಲ್ಲ. ಈ ಕುರಿತು ನನ್ನ ಒಂದೆರಡು ಮಾತುಗಳನ್ನು ಅವರ ಮುಂದಿಡತಕ್ಕದ್ದು ನನ್ನ ಕರ್ತವ್ಯವಾಗಿದೆ. ಮುಖ್ಯವಾಗಿ ನಿರಕ್ಷರಕುಕ್ಷಿಗಳಿಗೂ ಸುಲಭೋಪಾಯದಿಂದ ನ್ಯಾಯ, ನೀತಿ, ವಿನಯ, ಜ್ಞಾನ, ಚತುರತೆ, ಅನ್ಯೋನ್ಯತೆ, ವಾಗ್ಜಾಲ ಇವೇ ಮೊದಲಾದ ಸದ್ಗುಣಗಳನ್ನು



ವಿನೋದವಾಗಿ ಬೋಧಿಸತಕ್ಕ ಮುಖ್ಯೋಪಾಧ್ಯಾಯನಂತಿರುವ ಪುರಾತನ ಕಲೆಗಳ ಒಂದಂಗವಾದ ಯಕ್ಷಗಾನವು ವಿದ್ವಾಂಸರುಗಳಿಂದ ಕ್ಷುದ್ರಕಾವ್ಯವೆನಿಸಲ್ಪಟ್ಟು ಪಂಡಿತರಾಶ್ರಯವಿಲ್ಲದೆ, 'ಯದ್ಯದಾಚರತಿ ಶ್ರೇಷ್ಠಃತತ್ತದೇವೇತರೋ ಜನಃ' ಎಂಬಂತೆ ಐಶ್ವರ್ಯವಂತರ ಪ್ರೋತ್ಸಾಹಗಳೂ ಕಡಿಮೆಯಾಗಿ ಪೂರ್ಣ ಅಶಿಕ್ಷಿತ ಜನರ ವಶಕ್ಕೆ ಬಿದ್ದು, ಜೀವನವೃತ್ತಿಯ ಅಲ್ಪವಾದ ಒಂದಂಗವಾಗಿ ಅಮಾನ್ಯ ರೀತಿಯಲ್ಲಿ ವಿಹರಿಸುತ್ತಿರುವ ವಿಚಾರವನ್ನು ಪರ್ಯಾಲೋಚಿಸಿದರೆ ತುಂಬಾ ವಿಷಾದಕರವೆ. ವಿನಾ, 'ಲೋಕೋಭಿನ್ನರುಚಿಃ' ಎಂದಿರುವುದರಿಂದ ಅರ್ಥವೂ ಅವರವರ ಬುದ್ಧಿಯ ಸಾಮರ್ಥ್ಯವನ್ನೇ ಅನುಸರಿಸಿರುತ್ತದೆಂಬುದನ್ನು ನಾನು ಪ್ರತ್ಯೇಕ ಹೇಳಬೇಕಾಗಿಲ್ಲ.

ಆದುದರಿಂದಲೇ ಯಕ್ಷಗಾನಪ್ರಸಂಗಗಳಲ್ಲಿ ಅರ್ಥ ಮಾತಾಡತಕ್ಕವರು ಕೆಲವರು ಬಹಳ ದೀರ್ಘವಾಗಿಯೂ, ಕೆಲವರು ಅತಿ ಸಂಕ್ಷೇಪವಾಗಿಯೂ, ಇನ್ನು ಕೆಲವರು ಅರ್ಥವಾಗದ ಪ್ರಶ್ನೋತ್ತರಗಳಿಂದ ಒಬ್ಬರನ್ನೊಬ್ಬರು ಸೋಲಿಸಿ ಬಿಡುವುದೇ ತಮ್ಮ ಪಾಂಡಿತ್ಯದ ಲಕ್ಷಣವೆಂತಲೂ ತಿಳಿದುಕೊಂಡು, ಕವಿ ಸಮಯ ತಪ್ಪಿ ಚರಿತ್ರೆಯು ಭಂಗವಾಗಿ ರಸಾಭಾಸಗಳ ಗೊಡವೆ ಇಲ್ಲದೆ ಪ್ರೇಕ್ಷಕರ ಮನಸ್ಸಿಗೆ ಬೇಸರವನ್ನುಂಟುಮಾಡಿ, ಕಡೆಗೆ ಯಕ್ಷಗಾನ ಪ್ರಸಂಗವೆಂದರೆ ಇದೊಂದು ಜಗಳಕ್ಕೆ ಮೂಲವೆನಿಸುವ ವಿವಾದದ ತವರ್ಮನೆಯೆಂತಲೇ ನಿರ್ಧರಿಸಿಕೊಳ್ಳುವಷ್ಟಕ್ಕೆ ಬರುತ್ತದೆ; ಅಂದ ಮೇಲೆ ಯಕ್ಷಗಾನವು ಇನ್ನಷ್ಟು ಅಧಃಪತನವನ್ನೇ ಹೊಂದಲಿಕ್ಕೆ ಅವಕಾಶವಾದಂತಾಯಿತು.

ಈಗಿನ ಕಾಲದಲ್ಲಿ ಹಿಂದುಳಿದುದನ್ನು ಸುಧಾರಣಾ ಕ್ರಮದಿಂದ ಮುಂದಕ್ಕೆ ತರುವುದೇ ವಿವೇಕಿಗಳಾದ ಮಾನವರ ಕರ್ತವ್ಯವೆಂದಾದ ಮೇಲೆ ಪಾಮರರಾದಿಯಾಗಿ ಪಂಡಿತರವರೆಗೂ ಕಿವಿರಂಜನೆಗೆ ಆಸ್ಪದವಿದ್ದು ಅವಿದ್ಯಾವಂತರ ಸುಧಾರಣೆಗೆ ಅನುಕೂಲವಿರುವ ಯಕ್ಷಗಾನ ಪ್ರಸಂಗಗಳನ್ನು ಯೋಗ್ಯ ರೀತಿಯಿಂದ ಮುಂದೆ ತರುವುದು ಉಚಿತವೆಂಬುದರಿಂದಲೂ ೧೯೨೫ನೇ ಇಸವಿಯಲ್ಲಿ 'ಯಕ್ಷಗಾನೋಜ್ಜೀವಿನಿ ಸಭಾ ಮಂಗಳೂರು' ಎಂಬ ಹೆಸರಿನಿಂದ ಸ್ಥಾಪಿತವಾಗಿ, ಗವರ್ನಮೆಂಟ್ ಹಾಯರ್ ಎಲಿಮೆಂಟರಿ ಟ್ರೈನಿಂಗ್ ಶಾಲೆಯ ಉಮೇದ್ವಾರರಲ್ಲಿ ಯಕ್ಷಗಾನದ ಆಸಕ್ತಿಯನ್ನು ಉಂಟು ಮಾಡಬೇಕೆಂದು ಆಡಳಿತ ಸಭೆಯವರು ನಿರ್ಣಯಿಸಿ ಇದೇ 'ಕೃಷ್ಣ ಸಂಧಾನ' ಯಕ್ಷಗಾನ ಪ್ರಸಂಗವನ್ನು ಸುಧಾರಿತ ರೀತಿಯ ಶಿಕ್ಷಣದಿಂದ ಹೇಳಿಕೊಡುವಂತೆ ನನಗೆ ನೇಮಿಸಿದ ಪ್ರಕಾರ, ಅದಕ್ಕಾಗಿ ತಯಾರಿಸಿದ ಅರ್ಥದ ಸಂಚಿಕೆಗಳು ವ್ಯರ್ಥವಾಗಿ ಹೋಗದಂತೆ ಒಟ್ಟು ಕೂಡಿಸಿ ಛಾಪೆ ಮಾಡಿಸುವುದು ಲೇಸೆಂತ ಯಕ್ಷಗಾನಾಭಿಮಾನಿಗಳಾದ ಕೆಲವು ನನ್ನ ಸ್ನೇಹಿತರು ಉತ್ಸಾಹಪಡಿಸಿದರು.

ಯಕ್ಷಗಾನ ಹಾಡುವಿಕೆ, ಅರ್ಥ ಹೇಳುವಿಕೆ, ಚರ್ಮವಾದ್ಯ ಬಾರಿಸುವಿಕೆ ಮುಂತಾದವುಗಳು ಬಡಗಲಾಗಿನ ತಿಟ್ಟು, ತೆಂಕಲಾಗಿನ ತಿಟ್ಟು, ಮೈಸೂರು ತಿಟ್ಟು ಹೀಗೆ ಇನ್ನೂ ಅನೇಕ ತಿಟ್ಟುಗಳನ್ನು ನೋಡುವಾಗ್ಗ ಈ ಯಕ್ಷಗಾನಕ್ಕೆ ನ್ಯಾಯವಾದ ಒಂದು ಹಾದಿಯು ಇಂಥಾದ್ದೇ ಎಂದು ನಿರ್ಣಯಿಸಲಿಕ್ಕೆ ಪ್ರಕೃತ ಸಾಧ್ಯವಿಲ್ಲವೆಂದರೂ ಅತಿಶಯೋಕ್ತಿಯಾಗಲಿಕ್ಕಿಲ್ಲ. ಆದರೂ ನಿಷ್ಪಕ್ಷಪಾತ ಬುದ್ಧಿಯ ವಿವೇಕಶಾಲಿಗಳಾದ ವಿದ್ವಜ್ಜನ

... ಒಂದೊಂದು ವಿಷಯದಲ್ಲಾದರೂ ತಮ್ಮತಮ್ಮ ಅಭಿಪ್ರಾಯ ರೀತ್ಯಾ ಯಕ್ಷಗಾನದ ಸೇವಾ ಕಾರ್ಯದಲ್ಲಿ ಸಹಭಾಗಿಗಳಾಗಲೆಂಬ ತಾತ್ಪರ್ಯದಿಂದ, ಇದೊಂದು ಮಾದರಿಗಾಗಿ ಈ ಕಾರ್ಯದಲ್ಲಿ ಕೈ ಹಚ್ಚಿಬಿಟ್ಟೆನು. ಕೆಲಸ ಮಾಡುತ್ತಾ ಮುಂದೆ ವಿಚಾರಿಸಿ ನೋಡುವಾಗ, ಹಳೇ ಪ್ರಸಂಗಗಳನ್ನು ವ್ಯಾಕರಣ ಸೂತ್ರಬದ್ಧವಾಗಿ ಯಕ್ಷಗಾನ ಛಂದಸ್ಸಿಗೆ ವಿರೋಧವಿಲ್ಲದಂತೆ, ವಿಷಯಗಳನ್ನೊಳಗೊಂಡು ತಿದ್ದಿಕೊಳ್ಳುವುದೆಂದರೆ ನೂತನ ಕೃತಿಯನ್ನು ತಯಾರಿಸುವುದಕ್ಕಿಂತಲೂ ದಶಗುಣಾಧಿಕ ಕಷ್ಟವೆಂತಲೂ ತೋರಿದ್ದಲ್ಲದೆ, ಹಲವು ಪ್ರತಿಗಳು ಕೆಲವು ವಿಧಗಳಾಗಿದ್ದಂತೆಯೂ ಕಂಡು ಬಂತು. ಆ ಕುರಿತು ಇದೇ ಪ್ರಸಂಗದೊಳಗಿನ ಒಂದೆರಡು ವಿಷಯಗಳನ್ನು ಇಲ್ಲಿ ಸೂಚಿಸಿ ನನ್ನ ವಿಜ್ಞಾಪನೆಯನ್ನು ಪೂರ್ತಿಗೊಳಿಸುತ್ತೇನೆ" – ಎಂದಿದ್ದರು.

## ಸಂಪಾದನ ಸಾಮರ್ಥ್ಯ – ಶುದ್ಧಪಾಠ ನಿರ್ಣಯ

ಇದೇ 'ಕೃಷ್ಣಸಂಧಾನ'ಕ್ಕೆ (ಪ್ರಸಂಗಕರ್ತ ದೇವಿದಾಸ, ಕಾಲ ಕ್ರಿ.ಶ. ೧೮೦೦) ಹಲವಾರು ಪಾಠಾಂತರಗಳಿದ್ದು ವಿವಿಧ ಮೂಲಗಳನ್ನು ಶೋಧಿಸಿ ಪ್ರಸಂಗದ ಗ್ರಂಥ ಸಂಪಾದನೆಯನ್ನು ಮಾಡುವಾಗ ಅರ್ಕುಳರಿಗೆ ಎದುರಾದ ಸಮಸ್ಯೆ ಎಂದರೆ ಪ್ರಸಂಗಪಠ್ಯವನ್ನು ಛಂದೋನಿಯಮಗಳಿಗೆ ಅನುಸಾರ ಪ್ರಸಂಗದ ತಾಳಗಳ ಪದ್ಯಗಳನ್ನು ತಿದ್ದಿ ಪರಿಷ್ಕರಿಸುವಿಕೆ ಎಂಬುದು ಸ್ಪಷ್ಟ. ಪ್ರಸಂಗದ ಸ್ಥಿರಪಠ್ಯಕ್ಕೆ ಸಂಬಂಧಿಸಿದಂತೆ ಅವರ ಮಾತುಗಳಲ್ಲಿ "ವಿದುರನಾಜ್ಞೆಯಂತೆ ಧೃತರಾಷ್ಟ್ರನು ಸನತ್ಕುಮಾರನನ್ನು ಪ್ರಾರ್ಥಿಸಿಕೊಂಡು ತನಗೆ ಬ್ರಹ್ಮೋಪದೇಶವನ್ನು ಮಾಡಬೇಕೆಂದು ಕೇಳಿಕೊಂಡಾಗ ಆ ಮಹರ್ಷಿಯು ಆತನ ಮಕ್ಕಳಾದ ಕೌರವರ ದುರ್ಬುದ್ಧಿಯನ್ನು ಕುರಿತು ಬುದ್ಧಿವಾದವನ್ನೇ ಹೇಳಿದಂತಿರುವುದಲ್ಲದೆ, ಬ್ರಹ್ಮೋಪದೇಶವನ್ನು ಮಾಡಿದಂತೆ ತೋರುವುದಿಲ್ಲ. ಇದೇನು ಹೀಗಿರಲಿಕ್ಕೆ ಕಾರಣವೆಂದು ಅನೇಕ ಪ್ರಯತ್ನಗಳಿಂದ ಹಲವು ಹಳೇ ಪ್ರತಿಗಳಲ್ಲಿ ನೋಡಿದರೂ ಪ್ರಸಂಗ ಪರಿಚಯವುಳ್ಳ ಅನೇಕರಲ್ಲಿ ವಿಚಾರಿಸಿದರೂ, ಸಮರ್ಪಕವಾದ ಸಮಾಧಾನವು ಸಿಗದೆ ಬಹಳ ಯೋಚನೆಯಲ್ಲಿರುವಾಗ, ಒಂದು ದಿವಸ ದೈವವಶಾತ್ ವೇದಮೂರ್ತಿ ನೆಡ್ಲೆ ಗುರಿಕಾರ್ ಕೇಶವ ಭಟ್ಟರು (ಭಾಗವತರು) ನನಗೆ ಕಾಣಲಿಕ್ಕೆ ಸಿಕ್ಕಿದರು. ಅವರೊಡನೆ ಈ ಪ್ರಸ್ತಾಪವನ್ನು ಮಾತನಾಡಿದಾಗ, ತನ್ನ ತಂದೆಯವರು ತನಗೆ ಅಭ್ಯಾಸ ಮಾಡಿಸಿದ ಒಂದು ಪ್ರತಿಯಲ್ಲಿದ್ದ ಆ ಪದಗಳನ್ನು ಸಂಕೋಚವಿಡದೆ ನನಗೆ ಹೇಳಿದ ಅವರ ಮಹದುಪಕಾರವನ್ನು ನಾನು ಸ್ಮರಿಸತಕ್ಕದ್ದೆ. ಬಹು ಸುರಸವಾಗಿಯೂ ಅರ್ಥಗಾಂಭೀರ್ಯವಾಗಿಯೂ ಇರುವ ಅತ್ಯುತ್ತಮವಾದ ಆ ಪದ್ಯಗಳನ್ನು ಅರ್ಥಸಹಿತ ಬರೆಯೋಣಾಗಿದೆ. ಇದನ್ನು "ರಾಗ ಸಾಂಗತ್ಯ–ಮುನಿಪಕೇಳ್ ಕರುಣದಿ ಬ್ರಹ್ಮೋಪದೇಶವ" ಎಂಬ ಒಂದು ಪದವಾದೊಡನೆ ಎರಡನೆಯದಾಗಿ ಸೇರಿಸಿಕೊಳ್ಳತಕ್ಕದ್ದು' "ಜನಪಾ ಕೇಳ್ ನಿನ್ನ ನಂದನರು ಪಾಂಡವರೊಳು" ಎಂಬ ಪದವನ್ನು ಆರನೆಯದಾಗಿ ಸೇರಿಸಿಕೊಳ್ಳತಕ್ಕದ್ದು. ಪರಂತು ದೇಶಗಳನ್ನು ನೋಡದೇ ಬರೇ ಇತಿಹಾಸಗಳ ಆಧಾರದಿಂದಲೇ ದೇಶಗಳ ವರ್ಣನೆಯನ್ನು ಮಾಡಿದಂತೆ ಈ



ಪದಗಳಿಗೆ ಬರೆದ ಅರ್ಥಗಳಲ್ಲಿ ನ್ಯೂನಾತಿರೇಕಗಳಿದ್ದರೆ ಜ್ಞಾನಿಗಳು ಹಂಸಕ್ಷೀರ ನ್ಯಾಯದಂತೆ ಸ್ವೀಕರಿಸುವರಾಗಿ ವಂದಿಸುತ್ತೇನೆ. ಇನ್ನು ಕೆಲವು ಪ್ರತಿಗಳಲ್ಲಿ ಈ ನಾಲ್ಕು ಪದಗಳು ಇರಲಿಲ್ಲ. ಹಳೆಯ ಒಂದೆರಡು ಪ್ರತಿಗಳಲ್ಲಿ ಮಾತ್ರ ಇದ್ದವು".

ಹೀಗೆ ಪ್ರಸಂಗದ ವಿವಿಧ ಪಾಠಾಂತರಗಳನ್ನು ನೇರ್ಪುಗೊಳಿಸಿ ಧೃತರಾಷ್ಟ್ರನಿಗೆ ನೀತಿಧರ್ಮಗಳ ರಹಸ್ಯವನ್ನು, ಆತ್ಮಜ್ಞಾನದ ನೆಲೆಯನ್ನೂ ಅದರ ಮೂಲ ಮಂತ್ರಾಕ್ಷರದ ಬೀಜವನ್ನೂ ಜೊತೆಗೆ ಕೌರವಾದಿಗಳಿಗೆ ಬುದ್ಧಿ ಮಾತುಗಳನ್ನು ಹೇಳೆಂದು ನಿರ್ದೇಶಿಸಿ ನಿರ್ಗಮಿಸುವ ಬ್ರಹ್ಮರ್ಷಿ ಸನತ್ಕುಮಾರನ ಪಾತ್ರಕ್ಕೆ ಪ್ರಬುದ್ಧ ಅರ್ಥ ವಿವರಣೆ ಬರೆದ ಬಗೆ ಅಸದೃಶವಾದುದು. ಸಂಜಯನ ರಾಯಭಾರದ ಬಳಿಕ ಬರುವ ಸನ್ನಿವೇಶ. (ಪುಟ ೫೦–೫೬, 'ಅರ್ಥಸಹಿತ ಕೃಷ್ಣಸಂಧಾನ' ಚತುರ್ಥಮುದ್ರಣ) ಮುಂದುವರಿದು ಕೃಷ್ಣ ಸಂಧಾನ ಪ್ರಸಂಗದ ಮೂಲ ಕಥೆಯ ಆಕರದ ಕುರಿತಾಗಿ ಹೀಗೆ ಹೇಳುತ್ತಾರೆ:

"ಈ ಪ್ರಸಂಗವು ಹಲವು ಮಟ್ಟಿಗೆ ಕನ್ನಡ ಭಾರತವನ್ನೇ ಅನುಸರಿಸಿ ಇದೆ. ಇದರಲ್ಲಿ ದ್ರುಪದನ ಪುರೋಹಿತನೆಂದಿಷ್ಟೇ ಹೇಳುವುದಲ್ಲದೆ ಹೆಸರನ್ನು ಹೇಳಿದಂತಿಲ್ಲ. ವಿದುರನ ಹೆಂಡತಿ ಹೆಸರು 'ಅರುಣಿ' ಎಂದಿದೆ. ಇದಕ್ಕೆ ಬದಲಾಗಿ 'ಪಾರಸವಿ' ಎಂದು ತಿಳಿಯ ತಕ್ಕದ್ದು. ಇನ್ನೊಂದೆಡೆ 'ಕನಕ' ಎಂತ ಉಂಟೆಂತಲೂ ತೋರುತ್ತದೆ. ಮತ್ತು ಕಂದ, ವೃತ್ತ ಷಟ್ಪದಿಗಳಿಗೆ ಛಂದೋನಿಯಮಗಳು ಹೇಗೋ ಹಾಗೆಯೇ ಯಕ್ಷಗಾನ ತಾಳಗಳ ಪದ್ಯಗಳಿಗೂ ಛಂದೋ ನಿಯಮಗಳುಂಟೆಂಬುದು ತಿಳಿದು ಬರುತ್ತದೆ. ಆ ಪೈಕಿ ಈ ಪ್ರಸಂಗದಲ್ಲಿ ಮುಖ್ಯವಾಗಿ ತಿದ್ದಲು ಉಪಯೋಗಿಸಿದ ಒಂದೆರಡು ತಾಳಗಳ ನಿರ್ಣಯವನ್ನು ಮಾತ್ರ ಇಲ್ಲಿ ಎತ್ತಿ ಬರೆಯುತ್ತೇನೆ.

ರಾಗ : ಮಾರವಿ – ಏಕತಾಳ

"ಪದ। ಮಾರವಿ ಏಕಕೆ ಸೇರುವ ಚರಣಗ । ಳಾರಹವವುಗಳಲೀ ॥ ಮೂರಾರಕೆ
ದಶ ಸಾರುವುವುಳಿದಕೆ । ವಾರಣ ಮಾತ್ರೆಗಳೂ ॥೧॥

ರಾಗ : ಸುರುಟಿ – ಏಕತಾಳ

ಪದ। ಆರಡಿಎರಡರೊಳೂ । ದಶದಶ ಸೇರುವ ಮಾತ್ರೆಗಳೂ ॥ ತೋರುವವರಣಾ
ವೀರೆರಡುಳಿದಕೆ । ಸಾರುವುದೆಂಟರೊಳ್ಸುರುಟಿ ಏಕಕೆ ॥೧॥

ಈ ರೀತಿಯ ನಿಯಮಗಳಿಗನುಸಾರವಾಗಿ ತಾಳಗಳ ಪದ್ಯಗಳನ್ನೂ ಕಂದ, ವಾರ್ಧಿಕ, ಭಾಮಿನಿ ಮೊದಲಾದುವನ್ನೂ ತಿದ್ದಿ, ಸಂಭಾಷಣಾ ರೂಪಾರ್ಥಸಹಿತವಾಗಿ ಬರೆದ ಈ ಕೃಷ್ಣ ಸಂಧಾನ ಪ್ರಸಂಗವನ್ನು ವಿದ್ಯಾವಂತರಾದ ಯಕ್ಷಗಾನಾಭಿಮಾನಿಗಳು ಕೊಂಡು ಪ್ರೋತ್ಸಾಹಿಸಿದರೆ ಮಾತ್ರ, ಈ ನನ್ನ ಪ್ರಯತ್ನವು ಸಫಲವಾಗುವುದಲ್ಲದೆ, ಸದ್ಯದಲ್ಲೇ ಕುಮಾರ ವಿಜಯಕ್ಕೂ, ಮತ್ತು ಮುಖ್ಯವಾದ ಇತರ ಹಳೇ ಪ್ರಸಂಗಗಳಿಗೂ ಇದೇ ರೀತಿಯ ಅರ್ಥ ಬರೆಯಬೇಕೆಂಬ ನನ್ನ ಇಷ್ಟಾರ್ಥವು ನೆರವೇರಿದಂತಾಗುತ್ತಿತ್ತು. ಆದರೆ ಮಾಡುವುದೇನು? ಧನಬಲ, ಜನಬಲ, ವಿದ್ಯಾಬಲವೇ ಮುಂತಾದುವುಗಳಲ್ಲಿ ಅಬಲನಾದ ನಾನು ಇದನ್ನು ಮುದ್ರಣ ಮಾಡಿಸಲಿಕ್ಕೆ ಅನುಕೂಲವಿಲ್ಲದೆ ಕಂಗೆಟ್ಟು, ಮಧ್ಯದಲ್ಲಿ ಆರಂಭಶೂರನಂತಾಗಿ

ತಟಸ್ಥನಾಗಬೇಕಾಗಿ ಬಂತು, ಮಾತ್ರವಲ್ಲ, ಅರ್ಥಸಹಿತವಾದ ಯಕ್ಷಗಾನ ಪ್ರಸಂಗವೆಂದರೆ ಜನಸಾಮಾನ್ಯರಲ್ಲಿ ಉದಾಸೀನ ಭಾವವುಂಟಾದಂತೆಯೂ ತೋರಿಬಂತು. ಇಷ್ಟಾದರೂ ನಾನು ಧೈರ್ಯಗೆಡದೆ ಮುಂದಿನ ಪಥವನ್ನೇ ಚಿಂತಿಸುತ್ತಿರುವಾಗ್ಗೆ ದೈವವಶಾತ್ ಫಕ್ಕನೆ ಒಂದಾಲೋಚನೆಯು ಮನಸ್ಸಿನಲ್ಲೆ ಹೊಳೆದು, ಟ್ರೈನಿಂಗ್ ಶಾಲಾ ಮುಖ್ಯಾಧ್ಯಾಪಕರಾದ ಮ. ರಾ. ಉಳ್ಳಾಲ ಮಂಗೇಶ ರಾವ್, ಬಿ.ಎ., ಯಲ್.ಟಿ. ಇವರ ಸನ್ನಿಧಾನಕ್ಕೆ ಹೋಗಿ ನಮ್ರತೆಯಿಂದ ನನ್ನ ಅಭಿಪ್ರಾಯಗಳನ್ನೆಲ್ಲಾ ಅರಿಕೆ ಮಾಡಿಕೊಂಡಾಗ, ಸತ್ಯ ಪ್ರಿಯರೂ, ಉದಾರ ಬುದ್ಧಿಯವರೂ ಆದ ಆ ಮಹನೀಯರು ನನ್ನ ಇಷ್ಟಾರ್ಥವು ಕೈಗೂಡುವಂತೆ ಅಭಯವನ್ನಿತ್ತು, ಈ ಕಾರ್ಯದಲ್ಲಿ ಮನಃಪೂರ್ವಕವಾಗಿ ಸಂಪೂರ್ಣ ಸಹಾಯ ಮಾಡಿದ ಇವರ ಪರಮೋಪಕಾರಕ್ಕೆ ನಾನು ಸದಾ ಋಣಿಯಾಗಿದ್ದೇನೆ.

"ಬರೆದ ಅರ್ಥವನ್ನೂ, ತಿದ್ದಿದ ಪದ್ಯ ಭಾಗಗಳನ್ನೂ ಆದ್ಯಂತವಾಗಿ ಪರಿಶೋಧಿಸಿ, ತೃಪ್ತಿಕರವಾಗಿದೆಯೆಂದು ಸಮ್ಮತವನ್ನಿತ್ತ ಸಂಸ್ಕೃತ ಮತ್ತು ಕನ್ನಡ ಪಂಡಿತರಾದ ಮ.ರಾ. ಸಾಬಾಜಿ ಶ್ರೀನಿವಾಸಾಚಾರ್ಯರಿಗೂ, ನನ್ನ ಮಿತ್ರವರ್ಯರಾದ ಶ್ರೀಯುತ ಕವಿಭೂಷಣ ಕೆ. ಪಿ. ವೆಂಕಪ್ಪ ಶೆಟ್ಟರಿಗೂ ಕೃತಜ್ಞತಾಪೂರ್ವಕ ಅಭಿವಂದನೆಯನ್ನು ಸಮರ್ಪಿಸುವೆನಲ್ಲದೆ, ಈ ಸಂಬಂಧವಾಗಿ ನಾನು ಅಪೇಕ್ಷೆಪಟ್ಟ ಆಯಾಯ ಪುಸ್ತಕಗಳನ್ನು ತಕ್ಕಕಾಲಗಳಲ್ಲಿ ಅನುಕೂಲಿಸಿ ಕೊಡಲು ಸಹಾಯ ಮಾಡಿದ ಕುದ್ರೋಳಿ ಹಂಚು ಕಾರ್ಖಾನೆ ಗುಮಾಸ್ತರಾದ ಮ. ರಾ. ಕೆ. ಸೋಮಯ್ಯನವರ ಉಪಕಾರವನ್ನೂ, ಇದನ್ನು ಬೇಗನೆ ಮುದ್ರಿಸಿಕೊಡಲು ಪ್ರಯತ್ನಿಸಿದ ಸದಾನಂದ ಕೋ-ಒಪರೇಟಿವ್ ಪ್ರಿಂಟಿಂಗ್ ವರ್ಕ್ಸಿನ ಮೆನೇಜಿಂಗ್ ಡೈರೆಕ್ಟರರ ಉಪಕಾರವನ್ನೂ ಮನಸಾ ಸ್ಮರಿಸುತ್ತೇನೆ. ಆದರೆ ಪ್ರಮಾದವಶಾತ್ ಬಂದಿರುವ ಇದರೊಳಗಿನ ಹೆಚ್ಚು ಕುಂದುಗಳನ್ನು ವಿದ್ವನ್ಮಣಿಗಳಾದ ಯಕ್ಷಗಾನಾಭಿಮಾನಿಗಳು ನನ್ನ ಮೇಲಿನ ಸಹೋದರ ಪ್ರೇಮದಿಂದ ತಿದ್ದಿಕೊಳ್ಳುವುದಲ್ಲದೆ, ಅವರ ಸದಭಿಪ್ರಾಯಗಳನ್ನು ಸೂಚಿಸಿದಲ್ಲಿ ಅದನ್ನು ಶಿರಸಾವಹಿಸಿ, ಮುಂದಿನ ಮುದ್ರಣದಲ್ಲಿ ತಿದ್ದಿ ಸರಿಪಡಿಸಲೂ ಸಿದ್ಧವಾಗಿರುತ್ತೇನೆ" – ಎಂದು ನಿವೇದಿಸಿಕೊಂಡಿದ್ದರು. (ಈ ಕೃತಿಗೆ ಕವಿಭೂಷಣರ ಮುನ್ನುಡಿ ಇದೆ.)

ಈ ಪ್ರಸಂಗದಲ್ಲಿನ 'ಬ್ರಹ್ಮೋಪದೇಶ' ಸಂದರ್ಭದ ಉಲ್ಲೇಖಿತ ನಾಲ್ಕು ಪದ್ಯಗಳು ಹೆಚ್ಚುವರಿಯಾಗಿ ಸೇರ್ಪಡೆಗೊಂಡವು ಎಂಬ ಬಗ್ಗೆ ಕೃತಿಯ ಮೊದಲ ಮುದ್ರಣದ ವಿಜ್ಞಾಪನೆಯಲ್ಲಿ (೧೯೨೬ರಲ್ಲಿ) ವಿವರವಾಗಿ ಪ್ರಸ್ತಾಪಿಸಲಾಗಿದೆ. ಅದಕ್ಕೆ ಕಾರಣವನ್ನು ತಿಳಿಸಿರುವುದರಿಂದ ಅವು 'ಪ್ರಕ್ಷಿಪ್ತ' ಎಂದು ಕಂಡು ಬಂದರೆ ಆಶ್ಚರ್ಯವೇನು ಅಲ್ಲ. ೧೯೯೯ರಲ್ಲಿ ಪ್ರಕಟಗೊಂಡ ಕೃಷ್ಣ ಸಂಧಾನ ಪ್ರಸಂಗ ಅಧ್ಯಯನ ಕುರಿತಾದ ಡಾ। ಎಂ. ಪ್ರಭಾಕರ ಜೋಷಿಯವರ ಮಹಾಪ್ರಬಂಧ 'ಕೃಷ್ಣ ಸಂಧಾನ ಪ್ರಸಂಗ ಮತ್ತು ಪ್ರಯೋಗ' ಇದರಲ್ಲಿ ಆ ನಾಲ್ಕು ಪದ್ಯಗಳನ್ನು 'ಪ್ರಕ್ಷಿಪ್ತ' ಎಂದು ಗುರುತಿಸಿರುವುದು ಸರಿಯಾಗಿಯೇ ಇದೆ. ಆದರೆ ಆ ಸನ್ನಿವೇಶದ ಅಪೂರ್ವ ಪದ್ಯಗಳ ಕುರಿತಾದ ಮೂಲಚಿಂತನೆ, ಶೋಧನೆ, ಸಂಯೋಜನೆ, ಮಾಡಿ ಸರಳವಾಗಿ ಅವುಗಳಿಗೆ ಸಾರವತ್ತಾದ ಅರ್ಥವಿವರಣೆಯನ್ನು ತೊಂಬತ್ತು ವರ್ಷಗಳ ಹಿಂದೆ ಬರೆದ ಆಚಾರ್ಯರ ದುಡಿಮೆ– ಯಕ್ಷಗಾನ ಸಾಹಿತ್ಯಕ್ಕೆ ಅವರು ನೀಡಿದ ಅಮೂಲ್ಯ ಕೊಡುಗೆಯೇ ಸರಿ. ಪ್ರಕೃತ ದೊಡ್ಡ ಯಾ ಸಣ್ಣ ಮಟ್ಟದ



ತಾಳಮದ್ದಳೆ ಕೂಟಗಳಲ್ಲಾಗಲಿ, ಬಯಲಾಟಗಳಲ್ಲಾಗಲಿ ಈ ಅಪೂರ್ವ ಬ್ರಹ್ಮೋಪದೇಶದ ಸನ್ನಿವೇಶವನ್ನು ಕೈಬಿಟ್ಟು ಮುಂದುವರಿಯುವುದು ಅನುಚಿತವೇ ಸರಿ. ಆ ಕಾರಣಕ್ಕಾಗಿ ಅದನ್ನು 'ಅರ್ಥಸಹಿತ ಕೃಷ್ಣ ಸಂಧಾನ'ದ ಸ್ವಾದ ಸವಿಯಲು ವಾಚಕರ ಅನುಕೂಲಕ್ಕಾಗಿ ಯಥಾವತ್ತಾಗಿ ಅನುಬಂಧದಲ್ಲಿ ನೀಡಿದೆ.

## 'ಅರ್ಥಸಹಿತ ಕೃಷ್ಣ ಸಂಧಾನ'ದ ವೈಶಿಷ್ಟ್ಯ

ವಿದ್ವಾನ್ ಮಂದಾರ ಕೇಶವ ಭಟ್ಟರು 'ಅರ್ಥಸಹಿತ ಕೃಷ್ಣಸಂಧಾನ'ದ ವೈಶಿಷ್ಟ್ಯದ ಬಗ್ಗೆ ಹೀಗೆ ಬರೆದಿದ್ದಾರೆ: "ಶ್ರೇಷ್ಠ ಅರ್ಥಧಾರಿಗಳಾಗಿದ್ದ ಆಚಾರ್ಯರು ಕೃಷ್ಣಸಂಧಾನಕ್ಕೆ ಅರ್ಥ ಬರೆದು ಅರ್ಥಗಾರಿಕೆಗೆ ಮಾರ್ಗದರ್ಶನ ಮಾಡಿದ್ದಾರೆ. ಅವರ ಶ್ರಮವು ಸಾರ್ಥಕವೂ ಆದರ್ಶವೂ ಆಗಿದೆ. ಇದರಲ್ಲಿ ಕುತೂಹಲದ ಸಂಗತಿಯೆಂದರೆ ತಾಳಮದ್ದಳೆಗೆ ಇನ್ನೂ ಕೆಲವು ಪ್ರಸಂಗಗಳು ಬಳಸಲ್ಪಟ್ಟಿರುವುದಾದರೂ ಮೊದಲಾಗಿ ಕೃಷ್ಣಸಂಧಾನಕ್ಕೆ ಅರ್ಥ ಬರೆಯಬೇಕೆಂದು ಅವರಿಗೆ ಕಂಡುದೇ ಒಂದು ವಿಶೇಷ. ಇದನ್ನು ನೆನೆದಾಗಲೇ ಕೃಷ್ಣಸಂಧಾನ ಅರ್ಥಗಾರಿಕೆಯ ಭಾರ ಗೊತ್ತಾಗುತ್ತದೆ. ಆಚಾರ್ಯರು ಕೃಷ್ಣಸಂಧಾನಕ್ಕೆ ಅರ್ಥ ಬರೆಯಬೇಕಿದ್ದರೆ ಕೈಗೆ ದೊರೆತ ಪ್ರತಿಯನ್ನು ಎಷ್ಟು ಆಳವಾಗಿ ಅಭ್ಯಾಸ ಮಾಡಿದ್ದಾರೆಂಬುದು 'ವಿಜ್ಞಾಪನೆ'ಯನ್ನೋದಿದಾಗ ತಿಳಿಯುತ್ತದೆ. ಇಂತಹ ಅಭ್ಯಾಸವು ಅರ್ಥ ಹೇಳುವವರಿಗೆಲ್ಲ ಬೇಕು. ಇತ್ತೀಚೆಗೆ ಕೆಲವು ಪ್ರಸಂಗಗಳಿಗೆ ಅರ್ಥ ಬರೆದುದನ್ನು ಕಾಣುತ್ತೇವೆ, ಆದರೆ ಆಚಾರ್ಯರು ಬರೆದ ಅರ್ಥದೊಡನೆ ಅವುಗಳನ್ನು ಹೋಲಿಸಿ ನೋಡಿದರೆ ಆಚಾರ್ಯರ ಸಾಮರ್ಥ್ಯದ ಅರಿವಾಗುತ್ತದೆ.

"ಯಕ್ಷಗಾನದ ಅರ್ಥಗಾರಿಕೆಯು ಸಂವಾದಪ್ರಧಾನವಾದುದು. ಈ ಕೃತಿಯಲ್ಲಿ ಬರುವ ಪದ್ಯಗಳನ್ನು ಬಿಟ್ಟು ಅರ್ಥವನ್ನು ಮಾತ್ರ ಹೇಳಿದರೆ ಒಳ್ಳೆಯ ಗದ್ಯ ನಾಟಕವಾಗುತ್ತದೆ. ಆಯಾಯ ಪಾತ್ರಗಳ ಮಾತುಗಳನ್ನು ಗಮನಿಸಿದಾಗ ಆಚಾರ್ಯರು ಆಯಾ ಪಾತ್ರಗಳಲ್ಲಿ ತುಂಬಿರುವ ಜೀವಸತ್ವದ ಅರಿವಾಗುತ್ತದೆ. ಕೌರವ–ದ್ರೋಣ, ಕರ್ಣ–ಅಶ್ವತ್ಥಾಮ, ಭೀಮ –ದ್ರೌಪದಿ, ಕೃಷ್ಣ–ಕೌರವ ಇತ್ಯಾದಿ ಸನ್ನಿವೇಶಗಳ ಅರ್ಥಗಳು ಆಚಾರ್ಯರ ಕಲಾಸಿದ್ಧಿಗೆ ಸಾಕ್ಷಿಯಾಗಿವೆ. ಹೀಗ್ಯಾಕೆ, ನಗಾಡ್ಯಾರು, ಬಾಳ್ಯೇನು, ಇಚ್ಛೆಸ್ಯಾರು ಇಂತಹ ಪ್ರಯೋಗಗಳಲ್ಲಿ ಭಾಷೆಯ ಜಾನಪದ ಸ್ವರೂಪವು ಅರ್ಥಗಾರಿಕೆಯಲ್ಲಿ ಕಾಣಿಸಿಕೊಳ್ಳುವುದನ್ನು ನೋಡಬಹುದು. ಕನ್ನಡದಲ್ಲಿ ಪದ್ಯಗಳ ಪೂರ್ವೋತ್ತರಾರ್ಧಗಳ ಕೊನೆಯ ಅಕ್ಷರವು ಗುರುವಾಗಿರಬೇಕೆಂಬುದೊಂದು ನಿಯಮ. ಅವುಗಳು ಲಘುವಾಗಿದ್ದರೂ ಗುರುವೆಂದು ತಿಳಿಯುವುದೇ ರೂಢಿ. ಈ ರೂಢಿಯಂತೆ ಇಲ್ಲಿ ಅಂತಹ ಅಕ್ಷರವನ್ನು ಗುರುವಾಗಿಯೇ ಬರೆಯಲ್ಪಟ್ಟಿದೆ. ಉದಾ: ಬಂದಾ, ಪೇಳ್ದಾ, ಗೈದಿರಲೂ, ಈತಾ, ಕುಳ್ಳಿರ್ದನಾಗಾ –ಇತ್ಯಾದಿ.

ಪಾತ್ರವು ತಾನಾಡುವ ಮಾತಿನ ಮಧ್ಯೆ, ಸಮರ್ಥನೆಗಾಗಿ ಹೇಳುವ ಸುಭಾಷಿತಾದಿ ಸಂಸ್ಕೃತದ ತುಣುಕು ಮಾತುಗಳು ಮತ್ತು ಬ್ರಹ್ಮೋಪದೇಶದ ಪದ್ಯದ ವಿವರಣೆಗಳು ಆಚಾರ್ಯರು 'ಬಹುಶ್ರುತ'ರೆಂಬುದನ್ನು ತಿಳಿಸುತ್ತವೆ. ಪದ್ಯದ ಪರಿಧಿಯನ್ನು ದಾಟದೆ ತಕ್ಕ ಪ್ರಮಾಣದಲ್ಲಿ ಮಾತನ್ನು ಹೊಸೆದು ಪಾತ್ರಗಳನ್ನು ಜೀವಂತವಾಗಿ ಕಡೆದಿಟ್ಟಿರುವುದನ್ನು

ಗಮನಿಸಿದಾಗ ಆಚಾರ್ಯರ ಪಾತ್ರರಚನಾ ಕೌಶಲವೂ ಕಲಾಪ್ರಜ್ಞೆಯೂ ಅರಿವಾಗುತ್ತದೆ. "ಆಚಾರ್ಯರು ಬರೆದ ಅರ್ಥವನ್ನು ನೋಡಿ ಆಚಾರ್ಯರ ಅರ್ಥವಿಷ್ಟೆಯೆಂದು ತಿಳಿದರೆ ತಪ್ಪಾದೀತು.ಅವರ ಅರ್ಥಗಾರಿಕೆಯ ಸತ್ವವನ್ನು ತಿಳಿಯಲು ಇದು ಒಂದು ಸಣ್ಣ ಪ್ರಮಾಣದ ಸ್ವರೂಪವೆಂದು ತಿಳಿಯುವುದೆ ಸರಿಯಾದ ತಿಳುವಳಿಕೆಯಾದೀತು. ಆಚಾರ್ಯರ ಅರ್ಥಗಾರಿಕೆಯ ಕಲಾವೈಭವವನ್ನು ಅರಿಯಲು ಅವರ ಅರ್ಥವನ್ನು ಕೇಳಿದರೆ ಮಾತ್ರವೆ ಸಾಧ್ಯವಾದೀತು"–ಎಂದು ೩೦ ವರ್ಷಗಳ ಹಿಂದೆಯೇ ಆಚಾರ್ಯರ ಸಂಸ್ಮರಣ ಗ್ರಂಥ 'ಸ್ವರ್ಣ ಕಮಲ' ದಲ್ಲಿ ಉಲ್ಲೇಖಿಸಿರುತ್ತಾರೆ.

ಇತ್ತೀಚೆಗಿನ ತಾಳಮದ್ದಳೆ ಕುರಿತಾದ ಅಧ್ಯಯನ ಗ್ರಂಥ 'ವಾಚಿಕ' (೨೦೦೯ರಲ್ಲಿ ಪ್ರಕಟ) ಇದರಲ್ಲಿಯೂ ಆಚಾರ್ಯರ ಅರ್ಥಸಹಿತ ಕೃಷ್ಣಸಂಧಾನ ಕೃತಿಯ ಕುರಿತಂತೆ ವಿಶ್ಲೇಷಿಸಲಾಗಿದೆ. "ಸುಬ್ರಾಯ ಆಚಾರ್ಯರು ಪ್ರಸಂಗದ ಎಲ್ಲ ಪದ್ಯಗಳಿಗೂ ಅರ್ಥವನ್ನು ಬರೆದಿದ್ದಾರೆ. ಅರ್ಥಗಾರಿಕೆಯ ಭಾಷೆಯಲ್ಲಿ ಸಾತತ್ಯ ಕಾಣುತ್ತದೆ. ಹಾಗೆಯೇ ತಾಳಮದ್ದಳೆಯಲ್ಲಿ ಬರುವ ಕಿರು ಸಂವಾದಗಳು, ಎತ್ತುಗಡೆಯ ಕ್ರಮಗಳು ದಾಖಲಾಗಿವೆ, ಯಕ್ಷಗಾನ ಸಂಬಂಧಿಯಾದ ಸಾಹಿತ್ಯದಲ್ಲಿ ಅದಕ್ಕೆ ಐತಿಹಾಸಿಕ ಮಹತ್ವದ ಸ್ಥಾನವಿದೆ" ಎಂದು ಡಾ। ಪಾದೇಕಲ್ಲು ವಿಷ್ಣುಭಟ್ಟರು ದಾಖಲಿಸಿರುವುದು ಸಮುಚಿತವಿದೆ. ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಪ್ರಕಟವಾದ ಆ ಕೃತಿ ೮೩ ವರ್ಷಗಳ ಬಳಿಕವೂ ವರ್ತಮಾನ ಕಾಲದ ವಿದ್ವಾಂಸರ ಗಮನ ಸೆಳೆದಿರುವುದು ಅದರ ಮಹತ್ವದ ದ್ಯೋತಕ.

## ತುಳು 'ಕಿಟ್ಣ ರಾಜಿ ಪ್ರಸಂಗೊ' ಕೃತಿಗೆ ಆಕರ

ಯಕ್ಷಗಾನದ ಪ್ರಸಂಗಗಳಲ್ಲಿ ಜನಪ್ರಿಯ ಹಾಗೂ ತಾಳಮದ್ದಳೆಗೆ ಹೇಳಿ ಮಾಡಿಸಿದಂತಿರುವ 'ಕೃಷ್ಣಸಂಧಾನ ಪ್ರಸಂಗ'ವನ್ನು ತುಳುಭಾಷೆಗೆ ಅನುವಾದಿಸಲು ಉಭಯ ಭಾಷಾಕವಿ ಬಡಕಬೈಲು ಪರಮೇಶ್ವರಯ್ಯನವರು ಉದ್ದೇಶಿಸಿದ್ದರು. ಅದರ ನಾಲ್ಕು ಹಸ್ತಪ್ರತಿಗಳನ್ನು ಹಾಗೂ ನಾಲ್ಕು ಪ್ರಕಟಿತ ಪುಸ್ತಕಗಳನ್ನು ಸಂಗ್ರಹಿಸಿ ಒಂದಕ್ಕೊಂದು ತಾಳೆಹಾಕಿ ನೋಡಿದಾಗ ಅವರಿಗೆ ಹಲವಾರು ವ್ಯತ್ಯಾಸ, ಪಾಠಾಂತರಗಳೂ ಕಂಡುಬಂದವು. ಕೊನೆಗೆ ಅರ್ಕುಳ ಸುಬ್ರಾಯ ಆಚಾರ್ಯರು ಆರಿಸಿ ಅರ್ಥ ಬರೆದ ಪದ್ಯಗಳನ್ನೇ ಅವರ ಅನುಮತಿ ಪಡೆದು ಆಕರವಾಗಿ ಆಯ್ದುಕೊಂಡರು. ಮುಂದೆ ೧೯೨೯ರಲ್ಲಿ ತುಳು ಯಕ್ಷಗಾನ 'ಕಿಟ್ಣರಾಜಿ ಪ್ರಸಂಗೊ' ಪ್ರಕಟವಾಯಿತು. ಈಗಲೂ ಆಚಾರ್ಯರು ಸಂಪಾದಿಸಿದ ಕೃಷ್ಣಸಂಧಾನ ಪ್ರಸಂಗದ ಪದ್ಯಗಳು ರೂಢಿಯಲ್ಲಿವೆ ಎಂಬುದು ಗಮನಾರ್ಹ.

ಆಚಾರ್ಯರ ಈ ಉಪಕ್ರಮ ಮುಂದಿನ ಕಲಾವಿದ ವಿದ್ವಾಂಸರಿಗೆ ಹಲವಾರು ಯಕ್ಷಗಾನ ಪ್ರಸಂಗಗಳಿಗೆ ಅರ್ಥ ಬರೆಯಲು ಮೇಲ್ಪಂಕ್ತಿಯಾಗಿ (Precedent) ಕವಿಭೂಷಣ ವೆಂಕಪ್ಪ ಶೆಟ್ಟರು, ದೇರಾಜೆ ಸೀತಾರಾಮಯ್ಯ, ಕೀರಿಕ್ಕಾಡು ವಿಷ್ಣು ಮಾಸ್ತರ್, ಸೀತಾನದಿ ಗಣಪಯ್ಯ ಶೆಟ್ಟರ್, ದೊಡ್ಡ ಮತ್ತು ಸಣ್ಣ ಸಾಮಗರು, ಕುಂಬ್ಳೆ ಸುಂದರ ರಾವ್, ಮೂಡಂಬೈಲು ಗೋಪಾಲಕೃಷ್ಣ ಶಾಸ್ತ್ರಿ ಮೊದಲಾದವರಿಗೆ ಸ್ಫೂರ್ತಿ ನೀಡಿದೆ.



## ಛಾಂದಸ

ಖ್ಯಾತಿವೆತ್ತ ೧೯೩೦ ರ ಅಯ್ಯನಕಟ್ಟೆ ಯಕ್ಷಗಾನ ಸಮ್ಮೇಳನದ ಮುಖ್ಯ ನಿರ್ಣಯದಂತೆ ಯಕ್ಷಗಾನದ ಏಳಿಗೆಗಾಗಿ (೧) ಹಳೆಯ ಪ್ರಸಂಗಗಳಲ್ಲಿ ಆರಿಸಲ್ಪಟ್ಟ ಪ್ರಸಂಗಗಳನ್ನು ತಿದ್ದಿ ಶುದ್ಧವಾಗಿ ಮುದ್ರಿಸುವಿಕೆ (೨) ಐತಿಹಾಸಿಕ, ಸಾಮಾಜಿಕ ಪ್ರಬಂಧಗಳನ್ನು ರಚಿಸುವಿಕೆ ನಡೆಯಬೇಕಾಗಿದೆ ಎಂದು ಕರೆಕೊಡಲಾಗಿತ್ತು.

ಇದರ ಅನುಷ್ಠಾನವೆಂಬಂತೆ, ಆಚಾರ್ಯರು, ತೆಂಕುತಿಟ್ಟಿನ ಹಳೇ ಯಕ್ಷಗಾನ ಪ್ರಸಂಗ 'ರಾಜಸೂಯಾಧ್ವರ' ವನ್ನು (ಮೂಲಕವಿ ರಾಮಭಟ್ಟರು) ತಿದ್ದಿ ೧೯೩೨ರಲ್ಲಿ ಪ್ರಕಟಿಸಿದ್ದಾರೆ. ಪ್ರಕೃತ ಪ್ರಸಂಗದ ಅದೇ ಪದ್ಯಗಳು ಚಾಲ್ತಿಯಲ್ಲಿವೆ.

ಅಂತೆಯೇ ೧೯೩೩ರಲ್ಲಿ ಪ್ರಕಟಗೊಂಡ ಕವಿಭೂಷಣ ವೆಂಕಪ್ಪ ಶೆಟ್ಟರ ಚೊಚ್ಚಲಕೃತಿ 'ರಾಣಾ ರಾಜಸಿಂಹ' (ಪ್ರಕಾಶಕರು: ಸದ್ಧರ್ಮ ಪ್ರಚಾರಕ ಗ್ರಂಥಮಾಲೆ ಮಂಗಳೂರು) ಎಂಬ ಚಾರಿತ್ರಿಕ ಕಥೆಯ ಯಕ್ಷಗಾನ ಪ್ರಸಂಗದ ಸ್ಖಾಲಿತ್ಯಗಳನ್ನು ತಿದ್ದಲು ನೆರವಾದವರು ಶ್ರೀ ಅರ್ಕುಳ ಸುಬ್ರಾಯ ಆಚಾರ್ಯರು ಎಂದು ಶೆಟ್ಟರು ತಮ್ಮ ಕೃತಿಯ ಮುನ್ನುಡಿಯಲ್ಲಿ ಸ್ಮರಿಸಿ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ. ಈ ಕೃತಿಯಲ್ಲಿ ಅಯ್ಯನಕಟ್ಟೆ ಯಕ್ಷಗಾನ ಸಮ್ಮೇಳನದಲ್ಲಿ ಆರ್. ತಾತಾಚಾರ್ಯರಿಂದ (೧೯೩೦) ರಚಿಸಲ್ಪಟ್ಟ ಅಪೂರ್ವ ೧೬ ಕಂದ ಪದ್ಯಗಳು ಮೊದಲಿಗೆ ಪ್ರಕಟಗೊಂಡಿದ್ದವು. ಕಾಲಗರ್ಭದಲ್ಲಿ ಅಡಗಿದ್ದ ಅವುಗಳನ್ನು ೧೯೮೧ ರಲ್ಲಿ ಈ ಪುಸ್ತಕದ ಲೇಖಕನು ಗಮನಿಸಿ ಬೆಳಕಿಗೆ ತಂದಿದ್ದು, ತದನಂತರ ಅವು 'ಸ್ವರ್ಣಕಮಲ' (೧೯೮೮), 'ವಾಚಿಕ' (೨೦೦೯) ಹಾಗೂ 'ಬಲ್ಲಿರೇನಯ್ಯ' (ಪತ್ರಿಕೆ – ಸಪ್ಟೆಂಬರ್ ೨೦೧೪ ಸಂಚಿಕೆ) ಇತ್ಯಾದಿ ಕೃತಿಗಳಲ್ಲಿ ಪ್ರಕಟಗೊಂಡಿವೆ.

ಸ್ವಾತಂತ್ರ್ಯಪೂರ್ವದ ಪಠ್ಯ ಪುಸ್ತಕವೊಂದರಲ್ಲಿ 'ಯಕ್ಷಗಾನ ಛಂದಸ್ಸು' ಎಂಬ ಒಂದು ಪಾಠವನ್ನು ಬರೆದವರು ಅರ್ಕುಳರು. ಅದರಲ್ಲಿ 'ಸೌರಾಷ್ಟ್ರ। ತ್ರಿವುಡೆ' ಎಂಬ ರಾಗ ತಾಳದ ಲಕ್ಷಣಗಳ ಬಗ್ಗೆ ನಿರೂಪಣೆಯಿದೆ. ಅಂಗದ ಸಂಧಾನ ಪ್ರಸಂಗದ ಕೆಲವು ಪದ್ಯಗಳನ್ನು ಅದರಲ್ಲಿ ಸೋದಾಹರಣವಾಗಿ ವಿವರಿಸಲಾಗಿದೆ.

ಛಂದೋನಿಯಮ: ತರಳಕೇಳ್ ಸೌರಾಷ್ಟ್ರ ತ್ರಿವುಡೆಗೆ। ಬರುವ ನಾಲ್ಕಡಿಗಳಲಿ ಮೂರು। ಕ್ಕರಿ ಚತುರ್ದಶ ಮಾತ್ರೆ ಕಡೆಯಲಿ। ಮೆರೆವುದೇಳು।

ರೂಢಿಯಲ್ಲಿರುವ 'ಅಂಗದ ಸಂಧಾನ'ದ ಕೆಲವು ಪದ್ಯಗಳನ್ನು ಛಂದೋ ನಿಯಮಾನುಸಾರ ಪರಿಷ್ಕರಿಸಿದ್ದರು, ಒಂದು ಉದಾಹರಣೆ ಹೀಗಿದೆ.

ಮೂಲ: ದಾನವಾಂತಕನೆಂದ ಮಾತಿಗೆ। ಭಾನುಸುತ ತನ್ನಿಂದ ಜೇಷ್ಠನ। ಸೂನುವನು ಬೀಳ್ಕೊಟ್ಟನರಿ ಸಂ। ಧಾನ ಗೊಳಲು।

ಆಚಾರ್ಯರ ಪಾಠಾಂತರ : ಭಾನು ಕುಲಜನ ಉಚಿತ ವಚನಕೆ। ಭಾನುಸುತ ತನ್ನಿಂದ ಜ್ಯೇಷ್ಠನ। ಸೂನುವನು ಬೀಳ್ಕೊಟ್ಟನರಿ ಸಂಧಾನಗೊಳಲು ॥

ಇದು ಯಕ್ಷಗಾನ ಛಂದಸ್ಸು, ರಾಗ, ತಾಳ ಪದ್ಯ ರಚನೆ ಇವುಗಳಲ್ಲಿದ್ದ ಪರಿಣತಿ ಪರಿಶ್ರಮಗಳಿಗೆ ಅವರು ಮಾಡಿದ ಈ ಪಾಠಾಂತರ, ಕನ್ನಡಿ ಹಿಡಿದಂತಿದೆ.

## ಯಕ್ಷಗಾನ ಕವಿ, ಪ್ರಸಂಗ ಕರ್ತರಿಗೆ ಪ್ರೋತ್ಸಾಹ

ಪ್ರಸಂಗಕರ್ತ, ಅರ್ಥಧಾರಿ ಸೀತಾನದಿ ಗಣಪಯ್ಯ ಶೆಟ್ಟಿಯವರ ಚೊಚ್ಚಲ ಕೃತಿ 'ಶಕುಂತಳಾ ಪರಿಣಯ' (೧೯೩೮ ರಲ್ಲಿ ಪ್ರಕಾಶಿತ) ಇದರ ರಚನೆಯ ಹಸ್ತಪ್ರತಿ ಹಂತದಲ್ಲಿ ಆಚಾರ್ಯರು ಸೂಕ್ತ ಮಾರ್ಗದರ್ಶನ ನೀಡಿ ಪ್ರೋತ್ಸಾಹ ನೀಡಿದ್ದರೆಂದು ಶೆಟ್ಟರು ಈ ಪುಸ್ತಕದ ಲೇಖಕನಲ್ಲಿ ೧೯೮೧ ರಲ್ಲಿ ತಿಳಿಸಿದ್ದರು. ೧೯೩೦ ರ ದಶಕದಲ್ಲಿ ಗಣಪಯ್ಯ ಶೆಟ್ಟರು ಮಂಗಳೂರು ಕೊಡಿಯಾಲ್‌ಬೈಲ್‌ನ ಶಿಕ್ಷಕ ತರಬೇತಿ ಕೇಂದ್ರದಲ್ಲಿ ತರಬೇತಿ ಹೊಂದಿದ್ದರು.

ಅರ್ಕುಳರು 'ಶ್ರೀ ದೇವೀ ಮಹಾತ್ಮೆ' ಎಂಬ ಪ್ರಸಂಗವನ್ನು ಬರೆದಿದ್ದು ಹಸ್ತಪ್ರತಿ ರೂಪದಲ್ಲಿತ್ತು. (ಪ್ರಕೃತ ಲಭ್ಯ ಇಲ್ಲ).

## ಆಚಾರ್ಯರ ಅಭಿನಯ ಕೌಶಲ

'ಯಕ್ಷಗಾನ ನಾಟಕ' ಎಂಬ ಕಲಾ ಪ್ರಕಾರವು ೧೯೩೦-೪೦ರ ದಶಕದಲ್ಲಿ ಜನಪ್ರಿಯವಾಗಿತ್ತು. ಅದು ನಾಟ್ಯವಿಲ್ಲದ ರಂಗಪ್ರದರ್ಶನ. ಕುರಿಯ ವೆಂಕಟರಮಣ ಶಾಸ್ತ್ರಿಗಳು 'ಕೋಳ್ಯೂರು ಯಕ್ಷಗಾನ ನಾಟಕ ಮಂಡಳಿ'ಯನ್ನು ೧೯೩೦ರಲ್ಲಿ ಆರಂಭಮಾಡಿದ್ದರು. ಅದರ ನಾಟಕ ಪ್ರದರ್ಶನಗಳು ಕಾಸರಗೋಡು, ಮಂಗಳೂರು ಜಿಲ್ಲಾ ಪರಿಸರದಲ್ಲಿ ಜರುಗುತ್ತಿತ್ತು. ಈ ತಂಡದ ನಾಟಕ ಪ್ರದರ್ಶನ ಕಾಸರಗೋಡಿನಲ್ಲಿ ಜರುಗಿದಾಗ ಅತಿಥಿ ಕಲಾವಿದರಾಗಿ ಆಚಾರ್ಯರು ಭಾಗವಹಿಸಿದ್ದರು. ಆಗ ಅಲ್ಲಿನ ಕಲಾಪ್ರೇಮಿ ಸಮಾಜ ಬಾಂಧವರು ಬಂಗಾರದ ಪದಕ ಇತ್ತು ಆಚಾರ್ಯರನ್ನು ಸನ್ಮಾನಿಸಿದ್ದರು.

ದೇರಾಜೆ ಸೀತಾರಾಮಯ್ಯನವರು ೧೯೩೧ರಲ್ಲಿ 'ಯಕ್ಷಗಾನ ನಾಟಕ ಸಂಘ ಚೊಕ್ಕಾಡಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಸ್ವತಃ ನಟರಾಗಿ ಕಲಾ ಪ್ರೋತ್ಸಾಹಕರಾಗಿದ್ದರು. ಊರ ಪರವೂರ ಹಲವು ಪ್ರಸಿದ್ಧ ಯಕ್ಷಗಾನ ಅರ್ಥಧಾರಿಗಳು ಈ ತಂಡದ ರಂಗಭೂಮಿಯಲ್ಲಿ ಕಾಣಿಸಿಕೊಂಡರು. ಇದರ ಆಶ್ರಯದಲ್ಲಿ ಸುಮಾರು ೮೩ ವರ್ಷಗಳ ಹಿಂದೆ (೧೯೩೭ರಲ್ಲಿ) ಬೆಳ್ಳಾರೆಯಲ್ಲಿ ಜರುಗಿದ ಎರಡು ನಾಟಕ ಪ್ರದರ್ಶನಗಳಲ್ಲಿ ಸುಬ್ರಾಯ ಆಚಾರ್ಯರನ್ನು ಅತಿಥಿ ಕಲಾವಿದರಾಗಿ ಭಾಗವಹಿಸಲು ಆಹ್ವಾನಿಸಲಾಗಿತ್ತು. ಅವರಿಂದ 'ಕೃಷ್ಣಸಂಧಾನ'ದ ಕೌರವ ಮತ್ತು 'ವಾಲಿವಧೆ'ಯ ವಾಲಿಯ ಪಾತ್ರ ಮಾಡಿಸಲಾಗಿತ್ತು. ಭಾನುಮತಿ, ತಾರೆಯಾಗಿ ಸ್ತ್ರೀ ಪಾತ್ರ ನಿರ್ವಹಿಸಿದವರು ಪ್ರೊ. ಎಂ.ಆರ್. ಶಾಸ್ತ್ರಿಗಳು. ಅವರು ಆಚಾರ್ಯರ ನಟನ ಕೌಶಲದ ಸೊಬಗನ್ನು ೩೦ ವರ್ಷಗಳ ಹಿಂದೆಯೇ 'ಸ್ವರ್ಣ ಕಮಲ'ದಲ್ಲಿ ದಾಖಲಿಸಿರುತ್ತಾರೆ. ೧೯೩೯ ರಲ್ಲಿ ಡಾ. ಎಫ್.ಹೆಚ್. ಒಡೆಯರರ ಮುಂದಾಳುತನದಲ್ಲಿ ಅರ್ಕುಳದಲ್ಲಿ ಇಂತಹುದೇ ಒಂದು ನಾಟಕ ಜರುಗಿದ್ದು ಅದರಲ್ಲಿ ಕಟೀಲು ಮೇಳದ ದೇವೀಪಾತ್ರ ಖ್ಯಾತಿಯ ಕಡಂದೇಲು ಪುರುಷೋತ್ತಮ ಭಟ್ಟರು (ಶತಾಯುಷಿಗಳು, ಇತ್ತೀಚೆಗೆ ನಿಧನರಾದರು) ಭಾಗವಹಿಸಿದ್ದರು. ಅಂದಿನ ಯಕ್ಷಗಾನ ತಾಳಮದ್ದಳೆ ಕೂಟದ ದಿಗ್ಗಜಗಳಾದ ಕೆ.ಪಿ.ವೆಂಕಪ್ಪ ಶೆಟ್ಟರದು ಕೌರವನ ಪಾತ್ರ, ಭೀಮನಾಗಿ ಡಾ.ಎಫ್. ಹೆಚ್. ಒಡೆಯರ್, ಧರ್ಮರಾಯನಾಗಿ ಸುಬ್ರಾಯ ಆಚಾರ್ಯರು, ದ್ರೌಪದಿಯಾಗಿ ಕಡಂದೇಲು ಭಟ್ಟರು ಭಾಗವಹಿಸಿದ್ದರು. ಅಂದಿನ ಪ್ರಸಿದ್ಧ ಅರ್ಥಧಾರಿಗಳೊಂದಿಗೆ



ವೇಷಧರಿಸಲು ಭಟ್ಟರು ಹೆದರಿಕೊಂಡಿದ್ದರೆಂದು, ಆಚಾರ್ಯರು ಅವರಿಗೆ ಉತ್ತೇಜನ ನೀಡಿ ಹುರಿದುಂಬಿಸಿದ್ದರೆಂದು ಅವರು 'ಸ್ವರ್ಣ ಕಮಲ'ದಲ್ಲಿ ಸ್ಮರಿಸಿಕೊಂಡಿದ್ದಾರೆ.

ಯಕ್ಷಗಾನ ಆಸಕ್ತರು ಕುಂದಾಪುರದಲ್ಲಿಯೂ 'ಕೃಷ್ಣ ಸಂಧಾನ' ಎಂಬ ನಾಟಕಪ್ರದರ್ಶನವನ್ನು ಏರ್ಪಡಿಸಿ ಆಚಾರ್ಯರನ್ನು ಪಾತ್ರವಹಿಸಲು ಆಹ್ವಾನಿಸಿದ್ದರು. ಆಚಾರ್ಯರು 'ಕೌರವ'ನಾಗಿ, ನಾರಾಯಣ ಕಿಲ್ಲೆಯವರು 'ಕೃಷ್ಣ'ನಾಗಿ ನಟಿಸಿದ್ದರು. ನಾಟಕ ನೋಡಿದ ಹಲವರು ಆಚಾರ್ಯರ ಕೌರವನ ಪಾತ್ರವನ್ನು ಪ್ರಶಂಸಿದ್ದರಂತೆ. ತನ್ನ ಆಪ್ತರಲ್ಲಿ "ಅರ್ಥ ಹೇಳಲು ಮಾತ್ರಾ ಗೊತ್ತಿದ್ದು ಕುಣಿತ ಗೊತ್ತಿಲ್ಲದೆ ಇದ್ದರೆ ರಂಗ ಭೂಮಿಯಲ್ಲಿ ಅಭಿನಯ ಪರಿಪೂರ್ಣವಾಗಲಾರದು" ಎಂಬ ಆಚಾರ್ಯರ ಮಾತನ್ನು ಅವರ ದೀರ್ಘಕಾಲದ ಒಡನಾಡಿ ಪ್ರಸಿದ್ಧ ಅರ್ಥಧಾರಿ ಕುಬಣೂರು ಬಾಲಕೃಷ್ಣರಾಯರು, ೩೦ ವರ್ಷಗಳ ಹಿಂದೆಯೇ 'ಸ್ವರ್ಣಕಮಲ'ದಲ್ಲಿ ತನ್ನ ನೆನಪಿನ ಬುತ್ತಿಯನ್ನು ಬಿಚ್ಚಿಟ್ಟಿರುತ್ತಾರೆ.

## ಪುರಾಣ ಪ್ರವಚನಕಾರ

ಕುಬಣೂರು ಬಾಲಕೃಷ್ಣರಾಯರು 'ಸ್ವರ್ಣಕಮಲ'ದಲ್ಲಿ ಆಚಾರ್ಯರು ಕನ್ನಡ ಪುರಾಣಪ್ರವಚನ ಕ್ಷೇತ್ರದ ಆದ್ಯ ಪ್ರವರ್ತಕರು ಎನ್ನುವುದನ್ನು ದಾಖಲಿಸಿದ್ದಾರೆ: "ಆಚಾರ್ಯರು ಕನ್ನಡ ಪುರಾಣಪ್ರವಚನದ ಪ್ರವರ್ತಕರು. ಅವರು ಅರ್ಕುಳದಲ್ಲಿದ್ದಾಗಲೇ ಪಾವೂರು, ಹರೇಕಳ ಗ್ರಾಮಗಳ ಪ್ರಸಿದ್ಧ ಬಂಟರ ಮನೆಗಳಲ್ಲಿ ಪುರಾಣಪ್ರವಚನ ಮಾಡಿದ್ದರು. ಆಗ ಕೆಲವು ಮಹಿಳೆಯರು ಕೂಡ ಪುರಾಣವಾಚನ ಮಾಡುತ್ತಿದ್ದರು. ಆ ಕಾಲದಲ್ಲಿ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಗದುಗಿನ ಭಾರತ, ಪಂಪ ಭಾರತ, ಜೈಮಿನಿ ಭಾರತ ಮೊದಲಾದ ಕಾವ್ಯಗಳ ವಾಚನ ಮಾಡುತ್ತಿದ್ದು ಆ ವಾಚನಗಳು ತುಂಬ ಜನಪ್ರಿಯವಾಗಿದ್ದುವು ಹಾಗೂ ವಿದ್ವಜ್ಜನರ ಮೆಚ್ಚುಗೆಗೆ ಪಾತ್ರವಾಗಿದ್ದುವು. ಅದರಂತೆಯೇ ಸಂಸ್ಕೃತ ಗ್ರಂಥಗಳ ವಾಚನವನ್ನು ನಿಡ್ಡೋಡಿ ಅನಂತ ಉಪಾಧ್ಯಾಯರೂ, ಸಾಬಾಜೆ ಶ್ರೀನಿವಾಸಾಚಾರ್ಯರೂ ಮಾಡುತ್ತಿದ್ದರು.

"ಈ ಕಾರ್ಯಕ್ರಮಗಳನ್ನು ನೋಡಿ ಕನ್ನಡ ಪುರಾಣವಾಚನವು ಒಂದು ವ್ಯವಸ್ಥಿತ ಪ್ರಕಾರವಾಗಿ ರೂಪುಗೊಳ್ಳಬೇಕೆಂಬ ಮಹದಾಸೆ ಆಚಾರ್ಯರ ಮನಸ್ಸಿನಲ್ಲಿ ಉದಯಿಸಿತು. ೧೯೩೦ರಲ್ಲಿ ಕುದ್ರೋಳಿಯ ಗೋಕರ್ಣನಾಥ ದೇವಸ್ಥಾನದಲ್ಲಿ ಪ್ರತಿ ಆದಿತ್ಯವಾರ ಪುರಾಣಪ್ರವಚನ ಮಾಡಲು ಕರೆ ಬಂದಾಗ ಸುಬ್ರಾಯ ಆಚಾರ್ಯರು ತಮ್ಮ ಆಶಯವನ್ನು ಕಾರ್ಯರೂಪಕ್ಕಿಳಿಸಿದರು. ಮಹಾಬಲ ನೋಂಡರು ಓದುವುದು. ಇದಕ್ಕಾಗಿ ತಾವು ಬಾಲ್ಯದಲ್ಲಿ ಅರ್ಕುಳದ ತಮ್ಮಯ್ಯ ಮಾಸ್ತರರ ಶಿಷ್ಯರಾಗಿ ಪಡೆದ ಜ್ಞಾನ, ಅನುಭವಗಳನ್ನು ವಿನಿಯೋಗಿಸಿದರು. ಈ ಪ್ರವಚನ ಸತ್ರವು ಏಳೆಂಟು ವರ್ಷಗಳ ತನಕ ನಿರ್ವಿಘ್ನವಾಗಿ ನಡೆದುಬಂತು. ಕನ್ನಡದ ಪುರಾಣವಾಚನ ಕಾರ್ಯಕ್ರಮವನ್ನು ಕ್ರಮಬದ್ಧವಾಗಿ, ಅಚ್ಚುಕಟ್ಟಾಗಿ ನಡೆಯಿಸುವ ವಿಧಾನವನ್ನು ಮೊತ್ತ ಮೊದಲು (ದಕ್ಷಿಣಕನ್ನಡ ಜಿಲ್ಲೆಯಲ್ಲಿ) ರೂಪಿಸಿದವರು ಸುಬ್ರಾಯ ಆಚಾರ್ಯರೇ ಎಂದರೆ ತಪ್ಪಾಗಲಾರದು."

ಅಂದಿನ ಬಿಲ್ಲವ ಸಮಾಜದ ಧುರೀಣರು, ಖ್ಯಾತ ನ್ಯಾಯವಾದಿಗಳೂ ಆಗಿದ್ದ ನಾರ್ಣಪ್ಪ

ಸುವರ್ಣರು ಈ ಪುರಾಣ ಪ್ರವಚನದ ವ್ಯವಸ್ಥೆ ಮಾಡಿಸಿದ್ದರು. ತತ್ಸಂಬಂಧ ವಾರಕ್ಕೆ ಅವರಿಗೆ ಮೂರು ರೂಪಾಯಿ ಸಂಭಾವನೆ ಸಿಗುತ್ತಿತ್ತು. ನಾರ್ಣಪ್ಪ ಸುವರ್ಣರ ಔದಾರ್ಯವನ್ನು ಆಚಾರ್ಯರು ಬಹಳಷ್ಟು ಪ್ರಶಂಸೆ ಮಾಡಿದ್ದುಂಟು. ಈ ಕಾರ್ಯಕ್ರಮವು ನಿರಂತರ ಏಳೆಂಟು ವರ್ಷಗಳ ಕಾಲ ವ್ಯವಸ್ಥಿತವಾಗಿ ನಡೆಯಿತು. (೧೯೩೦ರ ದಶಕ).

ಆಚಾರ್ಯರು ಕನ್ನಡ, ತುಳು, ಭಾಷೆಗಳೆರಡರಲ್ಲೂ ಪ್ರವಚನ ಮಾಡುತ್ತಿದ್ದರು. "ಅವರ ಪ್ರವಚನ ಶೈಲಿ ವಿಶಿಷ್ಟವಾದುದು. ಪದ್ಯಗಳನ್ನು ಹಾಡುವಾಗ ಅರ್ಥದ ಕಡೆಗೆ ಗಮನ ಕೊಟ್ಟು ಪದಚ್ಛೇದ ಮಾಡಿ ಹಾಡಿಸುತ್ತಿದ್ದರು. ಒಳ್ಳೆಯ ಅರ್ಥಜ್ಞಾನವೂ ರಸಜ್ಞತೆಯೂ ಇದ್ದ ಮಹಾಬಲ ನೋಂಡರು ಹೀಗೆ ಹಾಡುವುದರಲ್ಲಿ ನಿಸ್ಸೀಮರು. ಸುಶ್ರಾವ್ಯವಾದ ಅವರ ಹಾಡುಗಾರಿಕೆ ಶ್ರೋತೃಗಳನ್ನು ಸಹಜವಾಗಿಯೇ ಆಕರ್ಷಿಸುವಂತಹದು. ಹೀಗೆ ಹಾಡಿದ ಪದ್ಯದ ಅರ್ಥವನ್ನು ಆಚಾರ್ಯರು ವಿವರಿಸುವ ಶೈಲಿ ಮನೋಹರವಾಗಿತ್ತು. ಸರಳವಾದ ಭಾಷೆಯಲ್ಲಿ ಎಲ್ಲರಿಗೂ ಸುಲಭಗ್ರಾಹ್ಯವಾಗುವಂತೆ ಹಾಗೂ ಆಯಾ ಸನ್ನಿವೇಶಗಳಿಗೆ ಒಪ್ಪುವ ರಸ-ಭಾವಗಳನ್ನು ಅಭಿವ್ಯಕ್ತಿಸುವಂತೆ, ಪದ್ಯದ ಚೌಕಟ್ಟಿನಿಂದ ಹೊರಗೆ ಹೋಗದೆ ಸೊಗಸಾಗಿ ವಿವರಿಸುವ ಕಲೆ ಅವರಿಗೆ ಒಲಿದಿತ್ತು. ಶುಷ್ಕಪಾಂಡಿತ್ಯ ಪ್ರದರ್ಶನಕ್ಕೆ ಅವರು ಎಂದೂ ಮನಮಾಡಿದವರಲ್ಲ." (ಕುಬಣೂರು ಬಾಲಕೃಷ್ಣ ರಾಯರು)

ಮಂಗಳೂರು ತಾಲೂಕಿನ ಪದವಿನಂಗಡಿ, ಬೆಂದೂರು, ತಲಪಾಡಿ, ದೇರಬೈಲು, ಅತ್ತಾವರ, ಗೋರಿಗುಡ್ಡೆ, ಹಳೆಯಂಗಡಿ, ಬೆಳ್ಳೂರು ಮತ್ತು ಕೊಟ್ಟಾರ ಮೊದಲಾದ ಕಡೆಗಳಲ್ಲಿ ತೊರವೆ ರಾಮಾಯಣ, ಗದಗು ಭಾರತ, ಭಾಗವತ, ದೇವೀಮಹಾತ್ಮ್ಯ ಮೊದಲಾದ ಪುರಾಣ ಕಾವ್ಯಗಳ ಪ್ರವಚನ ಕಾರ್ಯಕ್ರಮ ಆಚಾರ್ಯರಿಂದ ನಡೆಯುತ್ತಿದ್ದವು.

ಅತ್ತಾವರದ ಡಾ. ಅಡಪರ ಮನೆಯಲ್ಲಿ ಅವರ ಸಂಬಂಧಿಕರ ಹೆಣ್ಮಕ್ಕಳಿಗೂ ಆಚಾರ್ಯರು ಪುರಾಣಪ್ರವಚನದ ತರಬೇತಿಯನ್ನು ನೀಡುತ್ತಿದ್ದರು. ಹಳೆಯಂಗಡಿ ಮಠದಲ್ಲಿ ಆಚಾರ್ಯರಿಂದ ರಾಮಾಯಣ ಪ್ರವಚನ ಸಮಗ್ರವಾಗಿ ನಡೆದು ಸಮಾಪ್ತಿಗೊಂಡಾಗ ಅದರ ವ್ಯವಸ್ಥಾಪಕರು ಐದು ಪವನಿನ ಚಿನ್ನದ ಸರವನ್ನಿತ್ತು ಸನ್ಮಾನಿಸಿದ್ದರು.

ಪಂಡಿತ ಮುಳಿಯ ತಿಮ್ಮಪ್ಪಯ್ಯ, ಕವಿಭೂಷಣ ವೆಂಕಪ್ಪ ಶೆಟ್ಟರು, ಮಹಾಬಲ ನೋಂಡರು, ಮೈಂದಪ್ಪ ರೈಗಳು, ಕೆ. ವಿ. ಹರಿದಾಸ್ ವಿದ್ವಾನ್, ರಥಬೀದಿ ಅನಂತಯ್ಯ ಪುರೋಹಿತರು ಗಮಕದಲ್ಲಿ ಆಚಾರ್ಯರಿಗೆ ಜೊತೆಗೂಡುತ್ತಿದ್ದರು. ಪುರಾಣಪ್ರವಚನ ವ್ಯವಸ್ಥಿತವಾಗಿ ನಡೆಯಲು ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದರು.

ಆಚಾರ್ಯರ ಪುರಾಣಪ್ರವಚನದ ಕ್ಲಿಷ್ಟ ಸಂದರ್ಭದ ಅರ್ಥ ವಿವರಣೆಯ ಮಾದರಿಯೊಂದು ಹೀಗಿದೆ.

**i. ತೊರವೆ ರಾಮಾಯಣದ ರಾಮ-ರಾವಣ ಯುದ್ಧದ ಪ್ರಸಂಗ:** (೧೯೮೫ ರಲ್ಲಿ ದಾಖಲಿಸಿದವರು ಕುಬಣೂರು ಬಾಲಕೃಷ್ಣರಾಯರು)

"ಕನ್ನಡ ಪದ್ಯಗಳಲ್ಲಿ ಕಂಡುಬರುವ ಕೆಲವು ಕ್ಲಿಷ್ಟವಾದ ಒಗಟಿನಂತಹ ರಚನೆಗಳನ್ನು ವಿಶ್ಲೇಷಿಸಿ ಅವುಗಳ ಅರ್ಥವು ಜನರಿಗೆ ಸುಲಭಗ್ರಾಹ್ಯವಾಗುವಂತೆ ನಿರೂಪಿಸುವಲ್ಲಿ ಆಚಾರ್ಯರದು ಅಸಾಮಾನ್ಯ ಸಾಮರ್ಥ್ಯ.



**ಒಂದೆರಡು ಮೂರೆರಡು ಮೂರರೊ। ಳೊಂದಿದೆರಡಾರೇಳು ಪರಿವಿಡಿ**
**ಯಿಂದಲೆಂಟೊಂಬತ್ತರೆಣಿಕೆಯ। ಹತ್ತು ಹನ್ನೊಂದು**
**ಸಂದಣಿಸಲೆಂಟೇಳುಯೇಳರೊ। ಳೊಂದುಳಿಯಲಾರೈದು ನಾಲ್ಕ**
**ಲ್ಲಿಂದ ಮೂರೆರಡೊಂದು ಶಿರದಲಿ ಶರಕೆ ಗುರಿಯಾದ**

(೫೧ನೇ ಸಂಧಿ-೧೮)

ಯಾರಿಗಾದರೂ ಗೊಂದಲವನ್ನುಂಟು ಮಾಡುವ ಈ ಪದ್ಯವನ್ನು ಆಚಾರ್ಯರು ಹೀಗೆ ವಿವರಿಸಿದ್ದರು-ಎರಡೂ ಕೈಗಳ ಹತ್ತು ಬೆರಳುಗಳನ್ನು ಸಾಲಾಗಿ ಇರಿಸಿ, ಅವೇ ರಾವಣನ ಹತ್ತು ತಲೆಗಳೆಂದು ಭಾವಿಸಿಕೊಂಡು, ಒಂದರಿಂದ ಹತ್ತರ ವರೆಗೆ ಆ ತಲೆಗಳನ್ನು ರಾಮಬಾಣವು ಕೊಚ್ಚಿಕೊಂಡು ಹೋಯಿತೆಂತಲೂ, ಹತ್ತನೆಯ ತಲೆಯನ್ನು ತುಂಡರಿಸುವಾಗ ಇತರ ಒಂಭತ್ತು ತಲೆಗಳು ಚಿಗುರಿದ್ದರಿಂದ ಆ ಬಾಣವು ಪುನರಪಿ ಅವುಗಳನ್ನು ಕತ್ತರಿಸುತ್ತ ಹಿಂದಕ್ಕೆ ಹೋಗುವಾಗ ಕೊನೆಯ ತಲೆಯನ್ನು ತುಂಡರಿಸುವಾಗ ಮತ್ತೆ ಒಂಭತ್ತು ತಲೆಗಳು ಚಿಗುರಿ ಅವುಗಳನ್ನು ಕತ್ತರಿಸುತ್ತ ಬಾಣವು ಮುಂದೆ ಹೋಯಿತೆಂದೂ, ಈ ಕ್ರಿಯೆಯ ಪುನರಾವರ್ತನ ಆಗುತ್ತಿದ್ದಂತೆ, ಬಾಣವು ಮೊದಲು ಹತ್ತು ತಲೆಗಳನ್ನು ಕತ್ತರಿಸಿದ ಹಾಗಾಯಿತು. ಆಮೇಲೆ, ಚಿಗುರಿದ ಒಂಭತ್ತನ್ನು ಕತ್ತರಿಸುವಾಗ ಒಟ್ಟಿಗೆ ೧೯ ಆಯಿತು. ಪುನಃ ಒಂಭತ್ತು ತಲೆಗಳನ್ನು ಕತ್ತರಿಸುವಾಗ ೨೮ ಆಯಿತು. ಹೀಗೆಯೇ ಬಾಣವು ತಲೆಗಳನ್ನು ಕತ್ತರಿಸುತ್ತ ಮುಂದಕ್ಕೂ ಹಿಂದಕ್ಕೂ ಹೋಗುವಾಗ ಒಂದೊಂದು ಆವರ್ತಿಗೆ ಸಂಖ್ಯೆಯು ಒಂಭತ್ತರಷ್ಟು ಹೆಚ್ಚುತ್ತಿರುತ್ತದೆ, ಎಂದರೆ ೩೭, ೪೬, ೫೫, ೬೪, ೭೩, ೮೨, ೯೧, ೧೦೦ ಹೀಗೆ ಆವರ್ತಿಸುತ್ತಿರುತ್ತದೆ. ಪದ್ಯದಲ್ಲಿ ಒಂದರಿಂದ ಹತ್ತು ವರೆಗೆ ಆದ ಮೇಲೆ, ಆ ಮೇಲಿನ ಆವರ್ತಗಳಲ್ಲಿ ತಲೆಗಳ ಸಂಖ್ಯೆಗಳನ್ನು ಸೂಚಿಸುವಾಗ ಕೊನೆಯ ಅಂಕೆಗಳನ್ನು ಮಾತ್ರ ೯, ೮, ೭, ೬, ೫, ೪, ೩, ೨, ೧ ಹೀಗೆ ಹೇಳುವಾಗ ಅದು ಒಂದು ಒಗಟಿನಂತೆ ಕಾಣುತ್ತದೆ. ಆಚಾರ್ಯರು ಇದನ್ನು ಹೀಗೆ ವಿವರಿಸಿದಾಗ ಪದ್ಯದ ಅರ್ಥ ಎಷ್ಟೊಂದು ಸುಲಲಿತವಾಗಿದೆ ಎಂದು ಕಂಡಿತು."(ಸ್ವರ್ಣಕಮಲ)

**ii. (ಅ) ಕಾವ್ಯೋದ್ಯಾನ ವಿಹಾರ:** (೧೯೮೫ ರಲ್ಲಿ ದಾಖಲಿಸಿದವರು ಪ್ರೊ. ಎಂ.ಆರ್. ಶಾಸ್ತ್ರಿಗಳು-ಸ್ವರ್ಣಕಮಲ)

೧೯೩೩ರಲ್ಲಿ ಎಂ.ಆರ್.ಶಾಸ್ತ್ರಿಗಳು ಆಚಾರ್ಯರ ಮನೆಗೆ ಪ್ರಥಮ ಬಾರಿ ಹೋದಾಗ ಆಚಾರ್ಯರು 'ಜೈಮಿನಿ ಭಾರತದ ಸುಧನ್ವಕಾಳಗ'ದ ಪದ್ಯಗಳನ್ನು ಓದಿ ತಮ್ಮ ನಾಲ್ಕಾರು ಮಿತ್ರರಿಗೆ ಅರ್ಥ ವಿವರಣೆ ಮಾಡುತ್ತಿದ್ದರು. ಆಗ ಆಚಾರ್ಯರು ವಿವರಿಸುತ್ತಿದ್ದ ಪದ್ಯವಿದು:

**ವಾನರಸಮುನ್ನತಧ್ವಜವರೂಥದೊಳೈದು**
**ವಾನರಸಮರಭರವನರಿದು ಕಾಳಗಕೆ ತಾ**
**ವಾನರಸಮರ್ಥನೆಂದರ್ಜುನಂ ಬಹನೆಂದು ನಿಜಸಾರಥಿಗೆ ಸೂಚಿಸಿ ॥**
**ದಾನವರನಾನಿಮಿಷರೊಳ್ ನೀನೆ ಭಟನಹನಿ**
**ದಾನವನನೇಕಮುಖದಿಂ ಕೇಳ್ದು ಸಂಗ್ರಾಮ**
**ದಾನವನರಸಿಬಂದೆನೆಂದೆಚ್ಚನಾ ಸುಧನ್ವಂ ಪಾರ್ಥನಂ ಧುರದೊಳು॥** (ಸಂಧಿ ೧೩-೩)

ಎಂಬುದಕ್ಕೆ ಅರ್ಥ ವಿವರಿಸುವಾಗ ಅವರು 'ಸಂಗ್ರಾಮದ ಆ ನವನ್+ಅರಸಿ' ವಿಂಗಡಿಸಿ ಅರ್ಥ ಹೇಳಿದರು. 'ಯುದ್ಧದ ನವೀನತೆಯನ್ನು ಹುಡುಕಿಕೊಂಡು' ಎಂಬ ಅರ್ಥವನ್ನು ಮಾಡಿದ್ದರು. ಆವಾಗ ಶಾಸ್ತ್ರಿಗಳ ತಾರುಣ್ಯದ ಬುದ್ಧಿ ಸುಮ್ಮನಿರಬಿಡಲಿಲ್ಲ. ಅವರು "ಸಂಗ್ರಾಮ+ದಾನವನು+ಅರಸಿ" (ಯುದ್ಧ ಭಿಕ್ಷೆಯನ್ನು ಹುಡುಕಿಕೊಂಡು) ಎಂದರೆ ಸರಿಯಾಗುವುದಿಲ್ಲವೇ?" ಎಂದು ಕೇಳಿಯೇ ಬಿಟ್ಟರು. ಆಚಾರ್ಯರು ಮುಖವೆತ್ತಿ ಶಾಸ್ತ್ರಿಯವರನ್ನು ದಿಟ್ಟಿಸಿ ನೋಡಿದರು; ಸಿಟ್ಟಾಗಲಿಲ್ಲ. ಬದಲಿಗೆ 'ಆಗಬಹುದು' ಎಂದರು. ಅಲ್ಲಿ ಉಪಸ್ಥಿತರಿದ್ದ ಸರಸ ವಿನೋದಿಗಳಾದ ನಾರಾಯಣ ಕಿಲ್ಲೆಯವರು, 'ಸಂಗ್ರಾಮ ದಾನವನ+ಅರಸಿ' (ಯುದ್ಧವೆಂಬ ದೈತ್ಯನ ರಾಣಿ) ಎಂದೂ ಆಗಬಹುದಲ್ಲವೆ? ಎಂದು ಚಟಾಕಿ ಹಾರಿಸಿದರು. ವ್ಯಾಕರಣದ ದೃಷ್ಟಿಯಿಂದ ಆಚಾರ್ಯರ ಅರ್ಥವನ್ನು ಸಮರ್ಥಿಸುವುದು ಸ್ವಲ್ಪ ಪೇಚಿನ ಪ್ರಸಂಗವಾದರೂ, "ನಿನ್ನಲ್ಲಿ ಹೊಸ ಪರಿಯ ಯುದ್ಧವನ್ನು ನಿರೀಕ್ಷಿಸಿ ಬಂದಿದ್ದೇನೆ" ಎಂಬುದು ಸಂದರ್ಭಕ್ಕೆ ಒಪ್ಪುವಂತಹುದು, ಎಂದೇ ತೋರುತ್ತದೆ. ಯಮಕ ಶ್ಲೇಷಾಲಂಕಾರಗಳಲ್ಲಿ ಎಷ್ಟೋ ಕವಿಗಳು ವ್ಯಾಕರಣವನ್ನು ಅಲಕ್ಷಿಸಿದುದನ್ನು ನಾವು ಕಂಡಿರುವೆವಲ್ಲಾ? ಹೀಗೆ ಆರಂಭವಾದ ಶಾಸ್ತ್ರಿಗಳ ಮತ್ತು ಆಚಾರ್ಯರ ಸ್ನೇಹ ಹನ್ನೆರಡು ವರ್ಷಗಳ ತನಕ (೧೯೩೩-೧೯೪೫) ಅವಿಚ್ಛಿನ್ನವಾಗಿ ಮುಂದುವರಿಯಿತು. ಎಷ್ಟೋ ವೇಳೆ ರಾಮಾಯಣ, ಭಾರತಗಳಲ್ಲಿ ಶಾಸ್ತ್ರಿಗಳಿಗೆ ಅರ್ಥವಾಗದ ಪದ್ಯಗಳನ್ನು ಅವರು ಆಚಾರ್ಯರಲ್ಲಿ ಕೇಳಿದ್ದುಂಟು. ಒಮ್ಮೆಯೂ ಅವರು ಶಾಸ್ತ್ರಿಗಳ ಅನುಮಾನವನ್ನು ನಿವಾರಣೆಗೊಳಿಸುವುದರಲ್ಲಿ ಹಿಂದೆ ಬಿದ್ದಿರಲಿಲ್ಲ. ಭಾರತ, ರಾಮಾಯಣ ಮತ್ತು ಭಾಗವತ ಮುಂತಾದ ಷಟ್ಪದಿ ಕಾವ್ಯಗಳ ಮೇಲೆ ಆ ಕಾಲದ ಪಂಡಿತರಿಗೆ ಹೆಚ್ಚಿನ ಒಲವು ಇದ್ದಿಲ್ಲ. ಪಂಪ, ರನ್ನ, ಷಡಕ್ಷರಿ, ಹಾಗೂ ಷಟ್ಪದಿಕಾರರಲ್ಲಿ ಲಕ್ಷ್ಮೀಶ, ಇಂಥವರೇ ಪಂಡಿತರು ಆರಾಧಿಸುತ್ತಿದ್ದ ಮಹಾ ಕವಿಗಳು. ಗದಗು ಭಾರತದ ನಾರಣಪ್ಪ ಮತ್ತು ತೊರವೆ ರಾಮಾಯಣದ ನರಹರಿ ಕವಿಗಳ ಕಾವ್ಯಗಳನ್ನು ಪಂಡಿತರು ಗಮನಿಸುತ್ತಿದ್ದುದು ಕಡಿಮೆ. ಏನಾದರೂ ಒಂದು ಅರ್ಥ ಹೇಳಿ ಜಾರುತ್ತಿದ್ದರು. ಇಲ್ಲವೆ ತಮಗೆ ತೋಚಿದಂತೆ ತಿದ್ದುತ್ತಿದ್ದರು. ಹಾಗೆ ತಿದ್ದಿದ ಒಂದು ಪದ್ಯವನ್ನು ಇಲ್ಲಿ ಉದಾಹರಿಸಿ, ಆಚಾರ್ಯರು ಅದರ ನಿಜವಾದ ಅರ್ಥವನ್ನು ವಿವರಿಸಿದ ರೀತಿ ಹೀಗಿದೆ:

**ii. (ಅ) ವನಜ ವನದಲಿ ತುರುಚಿ ಕಬ್ಬಿನ**
**ಬನದಿ ಕಡಸಿಗೆ ಚೂತಮಯ ಕಾ**
**ನನದಿ ಬೊಬ್ಬುಲಿ ಭೀಮಸೇನನ ಇರವು ನಮ್ಮೊಳಗೆ ।**
**ಇನಿತು ಪಾರ್ಥನ ಮೇಲೆ ಯಮಳರ**
**ಜಿನುಗಿನಲಿ ಜಾರೆನು ಯುಧಿಷ್ಠಿರ**
**ಜನಪನಾಳಲಿ ಮೇಣು ಮಾಣಲಿ ಭೀತಿಯಿಲ್ಲೆಂದ ।**
**(ಗದುಗಿನ ಭಾರತ, ಶಕುನಿ ದುರ್ಯೋಧನೆ)**

ಸುಯೋಧನನು ತನ್ನ ದುಷ್ಟಚತುಷ್ಟಯದ ಮುಂದೆ ಹೇಳಿಕೊಳ್ಳುವ ಮಾತುಗಳಿವು. ಇದರಲ್ಲಿ ಮೊದಲಿನ ಮೂರು ಸಾಲುಗಳ ಅರ್ಥ ಸುಸ್ಪಷ್ಟ. ಭೀಮನ ಇರವು ನಮ್ಮೊಳಗೆ



ಹೇಗೆ ಇದೆ ಎಂಬುದನ್ನು ಕವಿ ವಿವರಿಸುತ್ತಾನೆ. ನಾಲ್ಕನೆಯ ಪಾದ ಮಾತ್ರ ಅರ್ಥ ಹೊಳೆಯದ ಹಾಗಿದೆ. 'ಇನಿತು ಪಾರ್ಥನ ಮೇಲೆ...' ಎಂದರೇನು? ವಾಕ್ಯವೇ ಸರಿಯಿಲ್ಲವಲ್ಲ! ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಿದವರು ಅದನ್ನು 'ಇನಿತು ಪಾರ್ಥನೊಳಿಲ್ಲ' ಎಂದು ಮಾತ್ರೆಗೆ ಮಾತ್ರೆ ಸರಿಹೊಂದುವಂತೆ ತಿದ್ದಿ ಅಚ್ಚು ಹಾಕಿಸಿ ವಿದ್ಯಾರ್ಥಿಗಳ ಕೈಸೇರುವಂತೆ ಮಾಡಿ ಕಗ್ಗಂಟನ್ನು (ಅವರ ಮಟ್ಟಿಗೆ) ಸುಲಭವಾಗಿ ಬಿಡಿಸಿದರು. ಮೂಲದ ಅರ್ಥವೇನೆಂದು ಆಚಾರ್ಯರಲ್ಲಿ ಶಾಸ್ತ್ರಿಗಳು ಜಿಜ್ಞಾಸೆಯಿಂದ ಕೇಳಿದರು. ಆಗ ಆಚಾರ್ಯರು ವಿವರಿಸಿದ ರೀತಿ ಹೀಗೆ ಇದೆ-

**ವನಜವನದಲಿ ತುರುಚಿ, ಕಬ್ಬಿನ ಬನದಿ ಕಡಸಿಗೆ,**
**ಚೂತಮಯ ಕಾನನದಿ ಬೊಬ್ಬುಲಿ-ಭೀಮಸೇನನ**
**ಇರವು ನಮ್ಮೊಳಗೆ**

ಭೀಮನ ಇರವು ನಮ್ಮೊಳಗೆ ಹೇಗಿದೆ ಎಂಬುದನ್ನು ಕವಿ ಅಲಂಕಾರಿಕವಾಗಿ ವಿವರಿಸಿ. 'ಇನಿತು ಪಾರ್ಥನ' ಇರವು ನಮ್ಮೊಳಗೆ. ಇರವು ನಮ್ಮೊಳಗೆ ಎಂಬುದು ಅಧ್ಯಾಹಾರ. ಭೀಮನ ವಿಚಾರದಲ್ಲಿ ಹೇಳಿದ್ದನ್ನೇ ಪುನಃ ಹೇಳದೆ, ಪುನರುಕ್ತಿ ಮಾಡದೆ, ಕವಿ ಚುಟುಕಾಗಿ ಹೇಳಿದ್ದಾನೆ.

**ಮೇಲೆ ಯಮಳರ ಜಿನುಗಿನಲಿ ಜಾರೆನು,**
**ಯುಧಿಷ್ಠಿರ ಜನಪನಾಳಲಿ ಮೇಣು ಮಾಣಲಿ, ಭೀತಿಯಿಲ್ಲ,**

ನಕುಲ, ಸಹದೇವರು ಅಲ್ಪಪೌರುಷಿಗಳು, ಅವರಿಗೆ ತಾನು ಹೆದರುವವನಲ್ಲ, ಧರ್ಮರಾಜನು ರಾಜನಾಗಲಿ ಅಥವಾ ಬಿಡಲಿ-ನನಗೆ ಭೀತಿಯಿಲ್ಲ. ಇದು ಪದ್ಯದ ಸ್ಪಷ್ಟವಾದ ಅರ್ಥ. ಕೌರವನಿಗೆ ಭೀತಿಯಿದ್ದುದು ಭೀಮಾರ್ಜುನರ ವಿಷಯದಲ್ಲಿ ಮಾತ್ರ.ಕುಮಾರವ್ಯಾಸನ ಭಾರತವನ್ನು ಆಳವಾಗಿ ಅಭ್ಯಾಸ ಮಾಡಿದವರಿಗೆ ಮಾತ್ರ ಆತನ ಇಂತಹ ಪದ್ಯಗಳ ವಿವರಣೆ ಸಾಧ್ಯ. ಆತನ ಶೈಲಿ ಸ್ವಾಭಾವಿಕವಾಗಿ ದಾರಿ ಮಾಡಿಕೊಂಡು ಹರಿಯುವ ನದಿಯಂತೆ. ಅದಕ್ಕೆ ಕೆತ್ತಿ ಕಟ್ಟಿದ ದಂಡೆಗಳಿಲ್ಲ, ಓತಪ್ರೋತವಾಗಿ ಹರಿದುಹೋಗುತ್ತದೆ. ಕ್ರಿಯಾಪದವೆಲ್ಲಿ ಎಂದು ಹುಡುಕುವ ಗೋಜಿಗೆ ಹೋಗುವುದು ಅವನ ಪ್ರತಿಭೆಗೆ ಅಪಚಾರವೆಸಗಿದಂತೆ. ಮೇಲಿನ ಪದ್ಯದ ಮೂರು ಪಾದಗಳಲ್ಲಿಯೂ ಕ್ರಿಯಾಪದವೇ ಇಲ್ಲ. ವೃಥಾ ಪದಪ್ರಯೋಗ ಇಲ್ಲ. ಒಮ್ಮೊಮ್ಮೆ ಒಂದು ಪದದಲ್ಲಿ ಇಡೀ ವಾಕ್ಯಾರ್ಥವನ್ನೆ ತುಂಬಿಸಬಲ್ಲ ಮಹಾಕವಿಯಾತ. ಆತನ ಇನ್ನೊಂದು ಪದ್ಯ ಹೀಗಿದೆ:

**ii. (ಇ) ಮರುಳೆ ಮಾಧವ ಮಹಿಯ ರಾಜ್ಯದ**
**ಸಿರಿಗೆ ಸೋಲುವನಲ್ಲ ಕೌಂತೇ**
**ಯರು ಸುಯೋಧನರೆನಗೆ ಬೆಸಕೈವಲ್ಲಿ ಮನವಿಲ್ಲ ।**
**ಹೊರೆದ ದಾತಾರಂಗೆ ಹಗೆವರ**
**ಶಿರವನರಿದೊಪ್ಪಿಸುವನೆಂಬೀ**
**ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ।**
**(ಉದ್ಯೋಗ ಪರ್ವ ಸಂಧಿ ೧೦-೧೪)**

ಕೌರವನಿಂದ ಧುರವೀಳ್ಯವನ್ನು ಪಡೆದು ಹೊರಟ ಕೃಷ್ಣನು ಕರ್ಣನನ್ನು ಕರೆದೊಯ್ದು ಅವನ ಜನ್ಮವೃತ್ತಾಂತವನ್ನುರುಹಿ ಭೇದಿಸಲು ಯತ್ನಿಸಿದಾಗ ಕರ್ಣನ ಬಾಯಿಯಿಂದ ಬರುವ

ಮಾತುಗಳಿವು. ಇಲ್ಲಿ, 'ಮರುಳೆ ಮಾಧವ' ಎಂಬ ಮಾತಿನ ಅರ್ಥವು ಯಾರಿಗೂ ಹೊಳೆಯದೆ, ಶ್ರೀ ಕೃಷ್ಣನನ್ನು 'ಮರುಳೆ' ಎಂದರೆ ಹುಚ್ಚನೆ ಎಂದು ಕರ್ಣನು ಸಂಬೋಧಿಸುವುದು ಸರಿಯಲ್ಲವೆಂದು 'ಮರಳು ಮಾಧವ' ಎಂದು ಉದ್ದಾಮ ಪಂಡಿತರು ತಿದ್ದಿದ್ದನ್ನು ಇತ್ತೀಚಿಗಿನ ಭಾರತದ ಪ್ರತಿಗಳಲ್ಲಿ ಕಾಣಬಹುದು. 'ಬಂದ ಹಾಗೆಯೇ ಹಿಂದೆ ಹೋಗು' (ಮರಳು) ಎಂದು ಅವರು ಸುಲಭ ಅರ್ಥ ಮಾಡಿದಂತೆ ತೋರುತ್ತದೆ. ಇದರ ಹಿಂದಿನ ಪದ್ಯವೇನೆಂದು ತಿಳಿಯುವ ಗೊಡವೆಗೆ ಯಾರೂ ಹೋದಂತಿಲ್ಲ. ಆಚಾರ್ಯರು ಇದನ್ನು ಸೂಚಿಸಿದವರು. ಹಿಂದಿನ ಪದ್ಯದಲ್ಲಿ ಶ್ರೀ ಕೃಷ್ಣನು ಕರ್ಣನಿಗೆ ಅರಸುತನದ ಆಮಿಷವನ್ನೊಡ್ಡಿ ಹೀಗೆ ಹೇಳುತ್ತಾನೆ:

"ಮರುಳುತನ ಬೇಡಾನು ನಿನ್ನಪದೆಸೆಯ ಬಯಸುವನಲ್ಲ..." ಮರುಳುತನ ಬೇಡ ಎಂದು ಬುದ್ಧಿ ಹೇಳಿದ ಶ್ರೀ ಕೃಷ್ಣನ ಮಾತಿಗೆ ಉತ್ತರವಾಗಿ ಕರ್ಣನು, "ಮರುಳೆ? – ನನ್ನದು ಹುಚ್ಚುತನವೆ? ಕೃಷ್ಣ! ನಾನು ಈ ಮಹಿಯ ರಾಜ್ಯದ ಸಿರಿಗೆ ಸೋಲುವನಲ್ಲ..." ಎಂದು ತನ್ನ ಹೃದಯ ನಿರ್ಧಾರವನ್ನು ತಿಳಿಸುತ್ತಾನೆ. ಸುಂದರವೂ ಗಂಭೀರವೂ ಆದ ಈ ಅರ್ಥ ಕುಮಾರವ್ಯಾಸನ ಶೈಲಿಯ ಪರಿಚಯವುಳ್ಳವರಿಗೆ ಮಾತ್ರ ಹೊಳೆಯಬಹುದು. ಆಚಾರ್ಯರಿಗೆ, ನಾರಣಪ್ಪನ ಶೈಲಿಯ ಮೇಲೆ ಅಂತಹ ಬಿಗಿ ಹಿಡಿತವಿತ್ತು.

ಇನ್ನೊಂದು, ತೊರವೆ ರಾಮಾಯಣದಲ್ಲಿ ಬರುವ ಸನ್ನಿವೇಶ. ಮರದ ಮರೆಯಿಂದ ಹೊರ ಬಂದು ವಾಲಿಯ ಮೇಲೆ ಬಾಣಪ್ರಯೋಗ ಮಾಡಿದ ರಾಮನನ್ನು ಕುರಿತು ವಾಲಿಯು ಆಡುವ ಮಾತುಗಳಲ್ಲಿ ಈ ಪದ್ಯ ಬರುತ್ತದೆ. ಅರ್ಥವಾಗದ ಈ ಪದ್ಯದಲ್ಲಿ ಕೆಲವು ಅಕ್ಷರಗಳನ್ನು ಮಾತ್ರ ಸರಿಪಡಿಸಿ ಆಚಾರ್ಯರು ಹೀಗೆ ಹೇಳಿದ್ದಾರೆ:

**ii. (ಈ) ಆಗಲದಕೇನೊಡಬಡಂಬಹು । ದಾಗಿ ನಿನಗಪರಾಧವೆಮ್ಮ ಯ**
**ಮೇಗೆ ಹೊತ್ತಡೆ ಹೊಲ್ಲೆಹೇನಳಿವೆಮಗೆ ಸಂಸ್ಕಾರ**
**ಬೇಗ ನುಡಿ ಕೃತದೋಷಕಾರಿಗ । ಳಾಗಿ ನಾವ್ ನಡೆದೆಡೆಗಳುಳ್ಳಡೆ**
**ಮೂಗರಾಗಿಹೆವೆನುತ ನೊಂದಾಡಿದನು ರೋಷದಲಿ (ಕಿಷ್ಕಿಂಧಾ ಕಾಂಡ, ೪೨)**

ಆಗಲಿ, ಅದಕೇನ್? ಒಡಂಬಡಲು ಬಹುದು. ಆಗಿ ಅಪರಾಧತ್ವ – ಒಮ್ಮೆಗೆ ಮೇಗೆ ಹೊತ್ತರೆ ಹೊಲ್ಲೆಹ ಏನ್ ಅಳಿವಿಂಗೆ ಸಂಸಾರ. ಬೇಗ ನುಡಿ ಕೃತದೋಷಕಾರಿಗಳಾಗಿ ನಾವ್ ನಡೆದೆಡೆಗಳ್ ಇಲ್ಲದೆ ಮೂಗರಾಗಿಹೆವು. ಜೀವಿ ತಪ್ಪು ಮಾಡುವುದಿಲ್ಲವೆಂದು ಹೇಳಲು ಹೇಗೆ ಸಾಧ್ಯ? ತಪ್ಪು ಮಾಡಿದ್ದರೆ ಒಪ್ಪುವುದರಲ್ಲಿ ಒಬ್ಬನ ಗೌರವ ಕಡಿಮೆಯಾಗುವುದಿಲ್ಲ. ಹೇಗೂ ಜೀವಿ ಒಂದು ದಿನ ಸಾಯಬೇಕಷ್ಟೆ? ಹೇಳು–ಮಾಡಿದ ತಪ್ಪೇನೆಂದು ತಿಳಿಯದೆ ನಾನು ಮೂಗನಾಗಿದ್ದೇನೆ. ಈ ಅರ್ಥವನ್ನು ಆಚಾರ್ಯರು ಬಿಡಿಸಿ ಹೇಳಿದಾಗ ಶಾಸ್ತ್ರಿಗಳಿಗೆ ಅವರ ವಿಷಯದಲ್ಲಿದ್ದ ಗೌರವ ಇಮ್ಮಡಿಗೊಂಡಿತು. ಭಾರತ–ರಾಮಾಯಣಗಳಲ್ಲಿ ಅವರು ಅಹರ್ನಿಶಿ ವ್ಯವಸಾಯ ಮಾಡಿ ಕವಿಹೃದಯವನ್ನು ಜನರಿಗೆ ಬಿಚ್ಚಿ ತೋರಿಸಿದ್ದಾರೆ. (ಸ್ವರ್ಣಕಮಲ)

## ಯಕ್ಷಗಾನ ಅರ್ಥಧಾರಿ

'ಯಕ್ಷಗಾನ ತಾಳಮದ್ದಳೆ' ಶ್ರೀಮಂತ ಕಲೆ–ಇದು ಬರಿಯ ಪಾಮರರ ಕಲೆಯಲ್ಲವೆಂಬುದನ್ನು ತನ್ನ ಅದ್ಭುತ ಸಾಧನೆಯಿಂದ ಕಲಾಪ್ರಪಂಚಕ್ಕೆ ತೋರಿಸಿಕೊಟ್ಟವರು



'ಯಕ್ಷಗಾನಾಚಾರ್ಯ' ಅರ್ಕುಳ ಸುಬ್ರಾಯಾಚಾರ್ಯರು. ಬರಿಯ ಮಾತುಗಳ ಮಾಧ್ಯಮದಿಂದ ಹೇಗೆ ರಸದ ಕಾರಂಜಿಯನ್ನು ಚಿಮ್ಮಿಸಬಹುದು, ಹೇಗೆ ಸಹೃದಯರನ್ನು ಪುರಾಣದ ವಿಸ್ಮಯ ಲೋಕಕ್ಕೆ ಒಯ್ಯಬಹುದು ಎಂಬ ರಹಸ್ಯವನ್ನು ಭೇದಿಸಿ ಈ ಕಲೆಯಲ್ಲಿ ಸಿದ್ಧಿಯನ್ನು ಪಡೆದು, ಯಕ್ಷಗಾನ ಕಲಾದೇವಿಯ ಕೀರ್ತಿಯ ಕಿರೀಟಕ್ಕೆ ಅನರ್ಘ ರತ್ನವನ್ನು ಅರ್ಪಿಸಿ ಕಣ್ಮರೆಯಾದ ಮಹಾನ್ ವ್ಯಕ್ತಿ ಅವರು. ೨೦ನೇ ಶತಮಾನದ (೧೯೦೦-೪೫) ಪೂರ್ವಾರ್ಧದಲ್ಲಿ ಆಚಾರ್ಯರು ಅಂದಿನ ಪ್ರಸಿದ್ಧ ಅರ್ಥಧಾರಿಗಳಿಗೆ ಗುರುಸ್ಥಾನದಲ್ಲಿದ್ದರು. "ಯಕ್ಷಗಾನ ಪ್ರವೀಣ" (ಕವಿ ಭೂಷಣರಿಂದ) "ಯಕ್ಷಗಾನದ ದ್ರೋಣ" (ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರಿಂದ) 'ರಸಋಷಿ' (ಪ್ರೊ. ಎಂ.ಆರ್. ಶಾಸ್ತ್ರಿಗಳಿಂದ) ಎಂಬೀ ಪ್ರಶಂಸೆಗೆ ಪಾತ್ರರೂ ಆಗಿದ್ದರು. ಆಪ್ತಮಿತ್ರ, ಕವಿಭೂಷಣ ವೆಂಕಪ್ಪ ಶೆಟ್ಟರ ಜೊತೆ ಜೊತೆಯಾಗಿ ತಾಳಮದ್ದಳೆ ಕ್ಷೇತ್ರವನ್ನು ಪರಿಷ್ಕರಿಸಿ ಶ್ರೀಮಂತಗೊಳಿಸಿದ ಅವರು, ಪೊಳಲಿ ಶಂಕರನಾರಾಯಣ ಶಾಸ್ತ್ರಿ, ನಾರಾಯಣ ಕಿಲ್ಲೆ, ಕುಬಣೂರು ಬಾಲಕೃಷ್ಣ ರಾಯರಂತಹ ಶ್ರೇಷ್ಠ ಅರ್ಥಧಾರಿಗಳ ಪ್ರವೇಶಕ್ಕೆ ಅಗತ್ಯದ ಭೂಮಿಕೆಯನ್ನು ಸಿದ್ಧಪಡಿಸಿದ ಮಹನೀಯರು. ಈ ದೃಷ್ಟಿಯಿಂದ ಆಧುನಿಕ ತಾಳಮದ್ದಳೆಯ ಪ್ರವರ್ತಕರು, ಯಕ್ಷಗಾನ ನವೋದಯ ಕಾಲದ (೧೯೨೦-೧೯೫೫) ಅಗ್ರಣಿಗಳು. ಪಾಮರರ ಮನರಂಜನೆಯ ಸಾಧನವಾಗಿದ್ದ ತಾಳಮದ್ದಳೆಯನ್ನು ಪಂಡಿತರು, ವಿದ್ಯಾವಂತರು ಶ್ರದ್ಧೆಯಿಂದ ಕೇಳುವಂತೆ ಮಾಡಿದವರು. ದೊಡ್ಡಮಟ್ಟದ ತಾಳಮದ್ದಳೆಗಳಲ್ಲಿ ಪ್ರಸಿದ್ಧ ಅರ್ಥಧಾರಿಗಳಿಗೆ ಹಂಚಿಕೆಯಾಗಿ ಉಳಿದಪಾತ್ರ ಯಾವುದೇ ಇರಲಿ ಅದನ್ನು 'ಪಾಲಿಗೆ ಬಂದುದೇ ಪಂಚಾಮೃತ' ಎಂಬಂತೆ ಸ್ವೀಕರಿಸಿ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸಿ ಶ್ರೋತೃಗಳ ಪ್ರಶಂಸೆಯನ್ನು ಪಡೆಯುತ್ತಿದ್ದರು. ಅಂತಹ ಕೂಟಗಳಲ್ಲಿ ಸ್ತ್ರೀ ಪಾತ್ರದ ಅರ್ಥಗಾರಿಕೆಯನ್ನು ಯಾವುದೇ ಪ್ರಸಿದ್ಧ ಅರ್ಥಧಾರಿಗಳು ಮಾಡಲು ಸಿದ್ಧರಿಲ್ಲದಿದ್ದಾಗ ಅವುಗಳನ್ನು ಕೂಡ ನಿರ್ವಹಿಸಿ ಪ್ರಖ್ಯಾತರಾದವರು. ಶಚಿ, ಕೈಕೇಯಿ, ದ್ರೌಪದಿ ಮೊದಲಾದವು ಆಚಾರ್ಯರು ವಹಿಸಿದ ಸ್ತ್ರೀ ಪಾತ್ರಗಳು. ೧೯೩೦ರ ಅಯ್ಯನಕಟ್ಟೆ ಖ್ಯಾತಿಯ ತಾಳಮದ್ದಳೆಯಲ್ಲಿ ಅವರು ನಿರ್ವಹಿಸಿದ ಪಾತ್ರ ಕುಮಾರ ವಿಜಯದ 'ಶಚಿ'. (ಯಕ್ಷಗಾನ ಮಕರಂದ)

## ತಾಳ ಮದ್ದಳೆಗೆ ಒಂದು ವ್ಯವಸ್ಥೆ

ಮೊದಲು (೧೯೧೦-೨೦ರ ದಶಕ) ತಾಳಮದ್ದಳೆ ಕೂಟಗಳು ವ್ಯವಸ್ಥಿತವಾಗಿ ನಡೆಯುತ್ತಿರಲಿಲ್ಲ. ಅರ್ಥಧಾರಿಗಳು ಒಬ್ಬರಿಗೊಬ್ಬರ ಸಂಪರ್ಕವಿಲ್ಲದೆ ತಾಳಮದ್ದಳೆಗಳಿಗೆ ಹೋಗಿ ಭಾಗವಹಿಸುತ್ತಿದ್ದರು. ಪ್ರಸಂಗ ನಿಶ್ಚಯವಾಗುವುದು, ಪಾತ್ರ ವಿತರಣೆಯಾಗುವುದು ಅಲ್ಲಿಯೇ. ಭಾಗವತರು ಯಾವ ಪದ್ಯಗಳನ್ನು ಹಾಡುತ್ತಾರೆ, ಯಾವುದನ್ನು ಬಿಡುತ್ತಾರೆ ಎಂಬುದು ಅರ್ಥಧಾರಿಗಳಿಗೆ ಮೊದಲೇ ಗೊತ್ತಾಗುತ್ತಿರಲಿಲ್ಲ. ಇದರಿಂದಾಗಿ ಅರ್ಥಹೇಳಲು ಪೂರ್ವಸಿದ್ಧತೆ ಮಾಡಿಕೊಳ್ಳುವ ಅವಕಾಶ ಅರ್ಥಧಾರಿಗಳಿಗೆ ಇರುತ್ತಿರಲಿಲ್ಲ. ತಾಳಮದ್ದಳೆ ಸೊಗಸಾಗಿ ಮೂಡಿಬರಲು ಪ್ರಸಂಗ ಯಾವುದೆಂಬುದನ್ನು ಮೊದಲೇ ನಿಶ್ಚಯಿಸಿ ಅರ್ಥಧಾರಿಗಳಿಗೆ ತಿಳಿಸಬೇಕೆಂದೂ ಯಾರ್‍ಯಾರು ಯಾವಯಾವ ಪಾತ್ರಗಳನ್ನು

ಹೇಳಬೇಕಾದ ಪದ್ಯಗಳು ಯಾವುವು ಎಂಬುದನ್ನು ನಿರ್ಣಯಿಸಬೇಕೆಂದೂ ಅಭಿಪ್ರಾಯಪಟ್ಟು – ಹೀಗೆ ಶಿಸ್ತು ಮತ್ತು ವ್ಯವಸ್ಥೆಯ ಅಗತ್ಯತೆಯನ್ನು ಮನಗಂಡು ಅಂದಿನ ಯಕ್ಷಗಾನ ತಾಳಮದ್ದಳೆ ತಂಡದ ನೇತಾರರಾದ ಕುಬಣೂರು ಬಾಲಕೃಷ್ಣರಾಯರಿಗೆ ಮತ್ತು ನಾರಾಯಣ ಕಿಲ್ಲೆಯವರಿಗೆ ಮೊದಲು ಸೂಚನೆ ಕೊಟ್ಟವರೇ ಅರ್ಕುಳ ಸುಬ್ರಾಯ ಆಚಾರ್ಯರು, ಎಂದು ನೆನಪಿಸಿಕೊಳ್ಳುತ್ತಾರೆ –ಕುಬಣೂರು ಬಾಲಕೃಷ್ಣ ರಾವ್ ಎಡ್ವಕೇಟ್ ಅವರು. (ಸ್ವರ್ಣ ಕಮಲ)

ಮೊದಲೇ ನಿರ್ಣಯಿಸಲ್ಪಟ್ಟ ಸಮಯದೊಳಗೆ ಇಟ್ಟುಕೊಂಡ ಕಥಾಭಾಗವನ್ನು ಪೂರ್ಣಗೊಳಿಸದೆ ಮಂಗಳ ಹಾಡುವ ಕ್ರಮವನ್ನು ಆಕ್ಷೇಪಿಸಿ ಸಮಯದೊಳಗೆ ಕಥೆಯನ್ನು ಮುಗಿಸಿಯೇ ಬಿಡತಕ್ಕದೆಂದೂ ಹೇಳಿ ಹಾಗೆಯೇ ನಡೆಸಿಕೊಂಡವರು. ತಾಳಮದ್ದಳೆಯ ಆರಂಭದಲ್ಲಿಯೇ ಕಲಾವಿದರೆಲ್ಲ ವೇದಿಕೆಗೆ ಬಂದು ಮಂಗಳದ ತನಕವು ಕೂತಿರತಕ್ಕದೆಂದು ಹೇಳುತ್ತಿದ್ದರು. ಈ ಮಾತನ್ನು ಸ್ವತಃ ಪಾಲಿಸುತ್ತಿದ್ದರು. ತಾಳಮದ್ದಳೆಯಲ್ಲಿ ವಿರಸಕ್ಕೆಡೆ ಮಾಡಿಕೊಡುವ ಚರ್ಚೆಗಳನ್ನು ತೀವ್ರ ಆಕ್ಷೇಪಿಸುತ್ತಿದ್ದ ಇವರಲ್ಲಿ ಒಮ್ಮೆ ಒಬ್ಬರು, ಬಂದು, 'ಮೊನ್ನೆ ಒಂದು ಕೂಟದಲ್ಲಿ ಒಬ್ಬರು, ನಿಮ್ಮ ಶಿಷ್ಯರಂತೆ, ಹೀಗೊಂದು ಚರ್ಚೆ ಮಾಡಿದರು' ಎಂದಾಗ ಆಚಾರ್ಯರು, 'ಅವರಿಗೆ ನಾನದನ್ನು ಹೇಳಿಕೊಡಲಿಲ್ಲ' ಎಂದಿದ್ದರು. (ಯಕ್ಷಗಾನ ಮಕರಂದ)

## ಅರ್ಕುಳರ ವ್ಯಾಖ್ಯಾನ ವೈಶಿಷ್ಟ್ಯ

ಹಿತಮಿತವಾದ ಭಾವಪೂರ್ಣ ಮಾತುಗಾರಿಕೆಯಲ್ಲಿ ತಾಳಮದ್ದಳೆಯ ಧರ್ಮರಾಯನೆಂದು ಹೇಳಿಸಿಕೊಂಡ ಆಚಾರ್ಯರು ಸುಗ್ರೀವ, ಭೀಮ ಮುಂತಾದ ಕೆಲವು ಪಾತ್ರಗಳಿಗೆ ಹೊಸ ತಿರುವನ್ನು ನೀಡಿ ಯೋಗ್ಯತೆಯನ್ನು ತಂದುಕೊಟ್ಟವರು. ಬಯಲಾಟದ ಚೌಕಿಯ ರೂಢಿಯ ಮಾತಿನಿಂದ ಹೇಳುವುದಾದರೆ ಸುಗ್ರೀವನ ಪಾತ್ರವು ವಾಲಿಯ ಕೈಯಿಂದ ಮಾವಿನ ಸೊಪ್ಪಿನ ಪೆಟ್ಟು ತಿನ್ನುವುದಕ್ಕೆ ಇದ್ದ ಪಾತ್ರವಾಗಿತ್ತು. ಅದನ್ನು ವಾಲಿ/ರಾಮ ಪಾತ್ರವನ್ನು ನಿರ್ವಹಿಸುತ್ತಿದ್ದ ವಿದ್ವಾಂಸರ ಜತೆಯಲ್ಲಿ ಸನ್ನಿವೇಶಕ್ಕೆ ಹಾಸುಹೊಕ್ಕಾಗಿದ್ದ ಸುಗ್ರೀವನ ಪಾತ್ರವು ಸಮರ್ಥರಿಂದಲೇ ನಿರ್ವಹಿಸಲ್ಪಡಬೇಕಾದ ಯೋಗ್ಯತೆಯುಳ್ಳ ಪಾತ್ರವೆಂದೂ ಜನರು ತಿಳಿಯುವಂತಾದುದು ಆಚಾರ್ಯರು ಸುಗ್ರೀವನ ಪಾತ್ರವನ್ನು ವಹಿಸಿದುದನ್ನು ಕಂಡು, ಕೇಳಿದ ಮೇಲೆಯೆ. ಭೀಷ್ಮ, ದಶರಥ, ಕೌರವ, ಭೀಮ, ದ್ರೌಪದಿ, ಧರ್ಮರಾಯ ಮುಂತಾದ ಪಾತ್ರವನ್ನು ನಿರೂಪಿಸುವಲ್ಲಿ ಇವರ ಕ್ರಮವು ಯಕ್ಷಗಾನಕಲೆಗೆ ಸಾಹಿತ್ಯಮೌಲ್ಯವುಳ್ಳ ಉತ್ತಮ ಕೊಡುಗೆಯಾಗಿತ್ತು. ವಿದ್ವಾಂಸ–ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿತ್ತು. ಪ್ರಸಂಗದ ಪದ್ಯಗಳಲ್ಲಿ ಬರುವ ಪದಗಳನ್ನು ಆಶ್ರಯಿಸಿ ಅರ್ಥ ಹೇಳುವ ಇವರ ಕೌಶಲ ಇವರಿಗೇ ಮೀಸಲು. ನಿರ್ದಾಕ್ಷಿಣ್ಯದ ವಿಮರ್ಶಕರಾದ ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು ಆಚಾರ್ಯರ ಅರ್ಥಗಾರಿಕೆ ಹೇಳಿಕೊಡುವ ಕ್ರಮವನ್ನು ಪ್ರಾಮಾಣಿಕವಾಗಿ ಮೆಚ್ಚಿ ಹೊಗಳುತ್ತಾರೆಂದ ಮೇಲೆ ಶ್ರೀಯುತರ ಪಾಠಕ್ರಮವನ್ನು ತಿಳಿಸುವುದಕ್ಕೆ ಬೇರೆ ಮಾತುಬೇಕಾಗಿಲ್ಲ. (ಯಕ್ಷಗಾನ ಮಕರಂದದಲ್ಲಿ ವಿದ್ವಾನ್‌ಮಂದಾರ



ಕೇಶವ ಭಟ್ಟರು ದಾಖಲಿಸಿದಂತೆ). ಅದರ ಮಾದರಿಯೊಂದು ಹೀಗಿದೆ:

ಒಮ್ಮೆ ಆಚಾರ್ಯರು ಯಕ್ಷಗಾನ ಪ್ರಬಂಧಗಳಲ್ಲಿ ಬರುವ ಪದ್ಯಗಳಿಗೆ ಹೇಗೆ ಅರ್ಥ ಹೇಳಬೇಕೆಂಬುದನ್ನು ಪ್ರೊ. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರಿಗೆ ವಿವರಿಸುತ್ತಿದ್ದರು. 'ಭೀಷ್ಮವಿಜಯ' ಎಂಬ ಪ್ರಸಂಗದ, ಭೀಷ್ಮ–ಪರಶುರಾಮ ಸಂವಾದ ಭಾಗವನ್ನು–ಭೀಷ್ಮನನ್ನು ಕುರಿತು ಪರಶುರಾಮನು ಹೇಳುವ ಈ ಪದ್ಯ ಭಾಗವನ್ನು ಅವರು ಎತ್ತಿಕೊಂಡರು:

**ಪದ್ಯ : ಎತ್ತಲಿರಿಸಿಹೆ ಭೀಷ್ಮ ಬುದ್ಧಿಗಳ ನೀನೀಗ ।**
**ಮತ್ತಕಾಶಿನಿ ಈಕೆಯನ್ಯ ಪುರುಷನೊಳು ॥**
**ಚಿತ್ತವಿಟ್ಟಳ ತಂದು ತೊರೆದ ಕಾರಣವೇನು ।**
**ಮತ್ತಿವಳ ನೀ ಬಿಟ್ಟರಾರು ಸಲಹುವರು ॥ (೫೮)**

**ಪರಪುರುಷನಹ ನೀನು ತಂದ ಕಾರಣ ಸಾಲ್ವ ।**
**ತರುಣಿಯನು ಬಿಟ್ಟಹನು ವರಿಸು ನೀನವಳ ॥**
**ಸರಸಿಜಾನನೆ ಸತ್ಯವಾಗಿಹಳು ಕೈಪಿಡಿದು ।**
**ಪೊರೆಯೊ ಸತಿ ಜನವನುಯೆನ್ನ ನೇಮದಲಿ (೫೯)**

"ಪರಶುರಾಮನು ಭೀಷ್ಮನಿಗೆ ಗುರು; ಈ ಗುರುತ್ವದಿಂದಲೇ ಅವನು ಮಾತಿಗೆ ತೊಡಗಬೇಕು. ಅದೇ ರೀತಿಯಲ್ಲಿಯೇ ಆರಂಭದ ಮಾತುಗಳು ಈ ಪದ್ಯಭಾಗದಲ್ಲಿವೆ. ವಿದ್ಯಾರ್ಥಿಗಳನ್ನು ಬೆದರಿಸುವ ಅಧ್ಯಾಪಕನಂತೆ 'ನಿನ್ನ ಬುದ್ಧಿಯನ್ನು ಎಲ್ಲಿಟ್ಟಿದ್ದಿ? ಎಂದು ಸ್ವಲ್ಪ ಬಿರುಸಾಗಿಯೇ ಪ್ರಶ್ನಿಸುತ್ತಾನೆ. ಮುಂದೆ 'ಇನ್ನೊಬ್ಬನಲ್ಲಿ ಅನುರಕ್ತಳಾದವಳನ್ನು (ಅಂಬೆಯನ್ನು) ತಂದುದೇ ಸರಿಯಲ್ಲ; ತಂದಮೇಲೆ ತೊರೆದುದು ಏನೇನೂ ಸರಿಯಲ್ಲ' ಎಂದು ಶಿಷ್ಯನ ದೋಷವನ್ನು ಎತ್ತಿ ಹಿಡಿದಂತೆ ಹೇಳಬೇಕು. ಆ ಮೇಲೆ 'ಅವಳ ರಕ್ಷಣೆಗೆ ನೀನೇ ಹೊಣೆಯಲ್ಲವೆ?' ಎಂದು ನಾಟಿಸಬೇಕು. ಇಷ್ಟಾದ ಮೇಲೆ 'ಪರಪುರುಷನಾದ ನೀನು ಆಕೆಯನ್ನು ತಂದುದರಿಂದಲೇ ಅಭಿಮಾನಿಯಾದ ಸಾಲ್ವನು ಆಕೆಯನ್ನು ಪರಿತ್ಯಜಿಸಿದ್ದಾನೆ. ಇಲ್ಲವಾದರೆ ಅವನೇ ಮದುವೆಯಾಗುತ್ತಿದ್ದನು; ಅವಳಿಗೂ ಸಮಾಧಾನವಾಗುತ್ತಿತ್ತು' ಎಂದು ಸರಿಯಾಗಿ ಮನದಟ್ಟಾಗುವಂತೆ ತಿಳಿಸಿ ಮಾತು ಮುಂದುವರಿಸಬೇಕು. ಪದ್ಯದಲ್ಲಿ 'ವರಿಸು ನೀನವಳ' ಎಂದಿದೆ. ಇದಕ್ಕೆ ಹೇಗೆ ಅರ್ಥ ಹೇಳಬೇಕು? 'ನೀನು ಅವಳನ್ನು ಮದುವೆಯಾಗು' ಎಂದು ಹೇಳುವುದು ಸರಿಯಾದೀತೆ? ಭೀಷ್ಮನು ಬ್ರಹ್ಮಚರ್ಯವನ್ನು ಸ್ವೀಕರಿಸಿರುವುದು ಜನಜನಿತವಾಗಿರುವಾಗ ಪರಶುರಾಮನಿಗೆ ಗೊತ್ತಿರಲಿಲ್ಲ ಎನ್ನುವಂತಿಲ್ಲ. ಮಾತ್ರವಲ್ಲ, ವಿಷ್ಣುವಿನ ಅವತಾರವೇ ಎಂದು ಪ್ರಸಿದ್ಧಿ ಪಡೆದ ಆತನು ಹಾಗೆ ಹೇಳಿದರೆ, ಆತನಿಗೂ ಆ ರೀತಿ ನಂಬಿಕೊಂಡ ಜನರಿಗೂ ಅನುಚಿತವೆನ್ನಿಸೀತು. ಆದುದರಿಂದ ಇಲ್ಲಿ ವರಿಸು ಎಂಬುದನ್ನು 'ವಲಿಸು–ಒಲಿಸು' ಎಂಬಂತೆ ರೂಪಾಂತರಿಸಿಕೊಂಡು 'ಆಕೆಯ ಮನಸ್ಸಿಗೆ ಒಂದು ನೆಮ್ಮದಿಯುಂಟಾಗುವಂತೆ ಏನಾದರೂ ಉಚಿತ ವ್ಯವಸ್ಥೆಯನ್ನು ಮಾಡು' ಎಂದು ಹೇಳಬೇಕು. ಆದರೆ ಕವಿ 'ವರಿಸು' ಎಂದೇ ಬರೆದಿರುವಾಗ ಹೀಗೆ ಅರ್ಥ ಹೇಳಬಹುದೇ ಎಂಬ ಶಂಕೆಯುಂಟಾಗಬಹುದು. ಆದರೆ ಇಲ್ಲಿಯೂ ಇಂತಹ ಸಂದರ್ಭಗಳು ಬರುವಲ್ಲಿಯೂ ಇದೇ ರೀತಿ ಅರ್ಥ ಹೇಳಿದರೆ

ದೋಷವಾಗುವುದಿಲ್ಲ. ಮಾತ್ರವಲ್ಲ, ಉಚಿತವೂ ಆಗುತ್ತದೆ.ಅರ್ಥಧಾರಿಗಳು ಅರ್ಥಧಾರಿಗಳೆನಿಸುವುದು ಇಂತಹ ಸಂದರ್ಭಗಳಲ್ಲಿಯೇ, ಇಲ್ಲವಾದರೆ ಕನ್ನಡ ಬಲ್ಲ ಯಾರಿಗೆ ಈ ಪದ್ಯ ಅರ್ಥವಾಗುವುದಿಲ್ಲ? ಎಂದು ಮುಂತಾಗಿ ಹೇಳಿದರು. ಹಾಗೆಯೇ ಮುಂದುವರಿಸಿ, ಭೀಷ್ಮನಾಗಲಿ ಪರಶುರಾಮನಾಗಲಿ ಪದ್ಯದ ಪ್ರಕಾರ ಒಬ್ಬರನ್ನೊಬ್ಬರು ಕೊಲ್ಲುತ್ತೇವೆ ಎಂಬ ಮಾತನ್ನು ಹಾಗೆ ಹೇಳದೆ ತನ್ನ ಪರಾಕ್ರಮದಲ್ಲಿ ಇಡೀ ಜಗತ್ತೇ ನಾಶವಾಗುವಾಗ ನಿನ್ನ ಮಾತೇನು? ಎಂದು ಹೇಳಿದರೆ ಸಾಕು" ಎಂದು ತಿಳಿಸಿದರು. ಆ ದಿನ ಅವರಲ್ಲಿ ಸುಮಾರು ಮೂರು ತಾಸುಗಳ ಅವಧಿಯಲ್ಲಿ ಭೀಷ್ಮ – ಪರಶುರಾಮ ಸಂವಾದವನ್ನು ಅವರ ಶಿಷ್ಯನಂತಿದ್ದು ಕಲಿತುಕೊಳ್ಳುವ ಅವಕಾಶ ತೆಕ್ಕುಂಜದವರಿಗೆ ೧೯೩೮ರಲ್ಲಿ ಲಭಿಸಿತ್ತು. ಮುಂದೆ ತೆಕ್ಕುಂಜದವರು ಒಮ್ಮೆ ಪರಶುರಾಮ ಪಾತ್ರವನ್ನು ವಹಿಸಿಕೊಂಡಾಗ, ಆಚಾರ್ಯರು ವಿವರಿಸಿ ಕೊಟ್ಟಂತೆ ಅರ್ಥಹೇಳಿ ಶ್ರೋತೃಗಳ ತೃಪ್ತಿಯನ್ನು ಗಳಿಸಿಕೊಂಡಿದ್ದರೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.(ಸ್ವರ್ಣಕಮಲ)

"ತಾಳಮದ್ದಳೆಯ ಕೂಟಗಳಲ್ಲಿ ಆಚಾರ್ಯರಿಗೆ ಹೆಚ್ಚಾಗಿ ಸೌಮ್ಯ ಸ್ವಭಾವದ ಪಾತ್ರಗಳು ಒಪ್ಪುವುದಾದರೂ ಮುಖ್ಯವಾದ ಪಾತ್ರಗಳನ್ನು ಕೊಡಲಾಗುತ್ತಿತ್ತು. ಶ್ರೀರಾಮ, ಯುಧಿಷ್ಠಿರ ಇಂತಹ ಪಾತ್ರಗಳ ನಿರ್ವಹಣೆಯಲ್ಲಿ ಅವರು ಎತ್ತಿದ ಕೈ. ಪೊಳಲಿ ಶಾಸ್ತ್ರಿಗಳ ಪಾಂಡಿತ್ಯ, ಕವಿಭೂಷಣ ಶೆಟ್ಟರ ಗಾಂಭೀರ್ಯ, ಕಿಲ್ಲೆಯವರು ವಾಗ್ವೈಖರಿ ಹೇಗೆ ಅಸದೃಶವೋ ಹಾಗೆಯೇ ಅರ್ಕುಳ ಸುಬ್ರಾಯ ಆಚಾರ್ಯರು ನಿರ್ವಹಿಸುತ್ತಿದ್ದ ಶ್ರೀರಾಮ ಯುಧಿಷ್ಠಿರಾದಿ ಸೌಮ್ಯಸ್ವಭಾವದ ಪಾತ್ರ ನಿರ್ವಹಣೆ ಕೂಡ. ಅಂತಹ ಪಾತ್ರಪೋಷಣೆಗೆ ಸಮರ್ಥರು ಅವರೊಬ್ಬರೇ ಎನ್ನುವಷ್ಟು ಔನ್ನತ್ಯವನ್ನು ಸಾಧಿಸಿದ್ದರು. ಶಾಸ್ತ್ರಿಗಳಾಗಲಿ, ಶೆಟ್ಟರಾಗಲಿ, ಕಿಲ್ಲೆಯವರಾಗಲಿ, ಒಮ್ಮೊಮ್ಮೆ ವಾಗ್ವಾದದ, ಚರ್ಚೆಯ ರಂಗಸ್ಥಳವನ್ನು ನಿರ್ಮಿಸುತ್ತಿದ್ದರೂ, ಆಚಾರ್ಯರು ಅಂತಹ ರೀತಿಯ ಜನಪ್ರಿಯತೆಗಿಂತ ಬಹುದೂರ ನಿಂತು ತನ್ನ ವಿಶಿಷ್ಟ ಯೋಗ್ಯತೆಯನ್ನು ವಿಶೇಷ ರೀತಿಯಿಂದ ಎತ್ತಿತೋರಿಸುತ್ತಿದ್ದ ಕಲಾವಿದರಾಗಿದ್ದರು. ಪಾತ್ರಗಳಿಂದ ಸಂಭಾಷಣೆ ಸಂದರ್ಭದಲ್ಲಿ ಅನಾಯಾಸವಾಗಿ ಬರಬಹುದಾದ ಚರ್ಚೆಯ ವಿಷಯಗಳನ್ನು ಆಚಾರ್ಯರು ಮುಂದೊಡ್ಡಿದ್ದನ್ನು ನಾನು ನೋಡಿದ್ದಿಲ್ಲ; ಅವರ ಕೂಡೆ ವಾಗ್ವಾದ ಮಾಡಿ ಗೆದ್ದೆನೆಂಬ ಶಿಫಾರಸ್ಸು ಪಡೆಯಲು ಯಾವ ಶ್ರೇಷ್ಠ ವಾಗ್ಮಿ ಕಲಾವಿದನೂ ಉಮೇದು ತೋರಿಸುತ್ತಿರಲಿಲ್ಲ. ಯಕ್ಷಗಾನ ತಾಳಮದ್ದಳೆಯ ಕ್ಷೇತ್ರದಲ್ಲಿ ಅಂದಿನಿಂದ ಇಂದಿನ ವರೆಗೂ ನಿರಂತರವಾಗಿ ಪ್ರಯೋಗದಲ್ಲಿರುವ ಈ ವಾಗ್ವಾದದ ರಂಜನೆಯಿಲ್ಲದೆಯೂ ಸುಬ್ರಾಯ ಆಚಾರ್ಯರು ಪಂಡಿತ ಪಾಮರಾದಿ ಸಭಾರಂಜನೆ ಮಾಡತಕ್ಕ ವಿಶೇಷವಾದ ಅರ್ಹತೆ ಹೊಂದಿದ್ದರು. ಇದು ಅವರ ಅರ್ಥಗಾರಿಕೆಯ ಮಹತ್ವದ ಸಿದ್ಧಿಯೆಂದು ತಿಳಿದುಕೊಳ್ಳಬೇಕು. ಷಡ್ರಸೋಪೇತವಾದ ಮೃಷ್ಟಾನ್ನ ಭೋಜನ ಪೂರ್ಣ ಸಂತೃಪ್ತಿಯನ್ನು ನೀಡುವಂತೆ, ಶಾಸ್ತ್ರಿಗಳ ಪಾಂಡಿತ್ಯ, ಕಿಲ್ಲೆಯವರ ವಾಗ್ವೈಖರಿ, ಶೆಟ್ಟರ ಗಾಂಭೀರ್ಯ ಇವೆಲ್ಲವುಗಳಂತೆ ಆಚಾರ್ಯರ ಸರಳತೆಯೂ ಅಂದಿನ ಯಕ್ಷಗಾನ ಕೂಟಗಳಿಗೆ ತನ್ನದೇ ಆದ ಶೋಭೆಯನ್ನು ಹೆಚ್ಚಿಸುತ್ತಿತ್ತು." ('ಸ್ವರ್ಣಕಮಲ'ದಲ್ಲಿ ಕಯ್ಯಾರ ಕಿಂಞಣ್ಣ ರೈಗಳು)

"ಯಕ್ಷಗಾನದ ಅಂತಸ್ತನ್ನು ಮೇಲೇರಿಸಿದ ಕಲಾವಿದರಲ್ಲಿ ಅರ್ಕುಳ ಸುಬ್ರಾಯ



ಆಚಾರ್ಯರು ಅಗ್ರಮಾನ್ಯರು. ಭಕ್ತಿ, ಕರುಣ ಮುಂತಾದ ಭಾವಗಳೇ ಪ್ರಧಾನವಾಗಿರುವ ಧರ್ಮರಾಯ, ಮಯೂರಧ್ವಜ, ಅಕ್ರೂರ, ಹಂಸಧ್ವಜ, ವಿಭೀಷಣ ಮೊದಲಾದ ಪಾತ್ರಗಳ ನಿರ್ವಹಣೆಯಲ್ಲಿ ಆಚಾರ್ಯರು ಅಪ್ರತಿಮರು. ಸತ್ಯ, ಜ್ಞಾನ, ಧರ್ಮ, ದಯೆ, ಶಾಂತಿ, ಕ್ಷಮೆಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದ ಧರ್ಮರಾಯನ ವ್ಯಕ್ತಿತ್ವವನ್ನು ಒಡಮೂಡಿಸುವಲ್ಲಿ ತಮ್ಮ ಔಚಿತ್ಯಪೂರ್ಣವಾದ ಮಾತಿನಿಂದಲೂ, ರಸಭಾವ ಪ್ರಜ್ಞೆಯಿಂದಲೂ ಅವರು ಸಾಕ್ಷಾತ್ ಧರ್ಮರಾಯನೇ ಆಗುತ್ತಿದ್ದರು. ಕೃಷ್ಣಭಕ್ತನಾದ ಮಯೂರಧ್ವಜನನ್ನು ಪರೀಕ್ಷಿಸುವುದಕ್ಕಾಗಿ ಕೃಷ್ಣನು ಬ್ರಾಹ್ಮಣ ವೇಷದಿಂದ ಬಂದು ಬೇಡಿದಾಗ, ಸಂಸಾರದ ನಶ್ವರತೆಯನ್ನೂ ಮಾನವ ಜೀವನದ ಉದ್ದೇಶವನ್ನೂ ವಿವರಿಸಿ ತನ್ನ ಪತ್ನೀಪುತ್ರರಿಂದಲೇ ದೇಹವನ್ನು ಸೀಳಿಸಿಕೊಳ್ಳುವ ಸನ್ನಿವೇಶದಲ್ಲಿ ಅವರ ಅರ್ಥಗಾರಿಕೆಯನ್ನು ಕೇಳಿ ಯಾರಿಗಾದರೂ ಕಣ್ಣೀರು ಬರಲೇಬೇಕು. ಆದರೂ ಆಚಾರ್ಯರ ಅರ್ಥಗಾರಿಕೆಯು ಭಕ್ತಿ, ಕರುಣಗಳಿಗೇ ಸೀಮಿತವಾದುದಲ್ಲ. 'ಕೃಷ್ಣಸಂಧಾನ'ದಲ್ಲಿ ವೀರರಸ ಪ್ರಧಾನವಾದ ಭೀಮನ ಪಾತ್ರವನ್ನೂ ಅಷ್ಟೇ ಗಂಭೀರವಾಗಿ, ರಸವತ್ತಾಗಿ ಚಿತ್ರಿಸುತ್ತಿದ್ದರು. ಕರ್ಣಪರ್ವದಲ್ಲಿ ಕೌರವನ ಪಾತ್ರ ವಹಿಸಿ ಅರ್ಥ ಹೇಳಿದರೆ, ದುರ್ಯೋಧನನ ಮುತ್ಸದ್ದಿತನದ ಕುಟಿಲ ರಾಜನೀತಿಯನ್ನು ಅದ್ವಿತೀಯವೆಂಬಂತೆ ಪ್ರದರ್ಶಿಸುತ್ತಿದ್ದರು. ಅರ್ಥಗಾರಿಕೆಯಲ್ಲಿ ಅವರ ಪ್ರತ್ಯುತ್ಪನ್ನಮತಿತ್ವವು ವಿಶೇಷವಾಗಿ ಪ್ರಕಟವಾಗುತ್ತಿತ್ತು. ಅವರಲ್ಲಿ ಇನ್ನೊಂದು ವಿಶೇಷ ಗುಣವಿತ್ತು. ಭಾಗವತನ ಹಾಡುಗಾರಿಕೆಯು ಯಾವ ಶ್ರುತಿಯಲ್ಲಿರುತ್ತಿತ್ತೋ ಅದೇ ಶ್ರುತಿಯಲ್ಲಿ ಆಚಾರ್ಯರ ಅರ್ಥಗಾರಿಕೆಯೂ ಇರುತ್ತಿತ್ತು. ಇದರಿಂದ ಬಂಗಾರದ ಹೂವಿಗೆ ಪರಿಮಳವೂ ಸೇರಿದಂತೆ ಅವರ ಅರ್ಥಗಾರಿಕೆಯು ಅನುಪಮವಾದ ಕಲಾಸೌಂದರ್ಯದಿಂದ ಮೆರೆಯುತ್ತಿತ್ತು". (ಅಗರಿ ಶ್ರೀನಿವಾಸ ಭಾಗವತರು 'ಸ್ವರ್ಣಕಮಲ'ದಲ್ಲಿ)

## ಅಧ್ಯಾಯ: ಮೂರು

## ಆಚಾರ್ಯರ ಆಶುವೈಭವ

### ಅರ್ಥ ವೈಭವ: ಪಾತ್ರ ಚಿತ್ರಣ ಸಾಮತಿ

ಅರ್ಕುಳ ಸುಬ್ರಾಯ ಆಚಾರ್ಯರ ಅಭಿನಂದನ ಗ್ರಂಥ 'ಸ್ವರ್ಣಕಮಲ'ದಲ್ಲಿ (೧೯೮೫) ಪ್ರೊ. ಎಂ.ಆರ್ ಶಾಸ್ತ್ರಿಗಳು ಆಚಾರ್ಯರ ಅರ್ಥಗಾರಿಕೆಯ ಕೆಲವು ರಸಪ್ರಸಂಗಗಳನ್ನು ದಾಖಲಿಸಿದ್ದಾರೆ. ಅವರ ಬರಹದಿಂದ ಈ ಕೆಳಗಿನ ಉದಾಹರಣೆಗಳನ್ನು ಉದ್ಧರಿಸಲಾಗಿದೆ:

"ಸಂಗೀತಾದಿ ಶಾಸ್ತ್ರಗಳಿಗೆ ಒಂದು ನಿಯಮಿತ ಮಾರ್ಗವಿರುವಂತೆ ಯಕ್ಷಗಾನದ ಮಾತುಗಳಿಗೂ ಕ್ರಮಬದ್ಧವಾದ ದಾರಿಯಿದೆ ಎಂದು ಆಚಾರ್ಯರು ಆಗಾಗ ಹೇಳುತ್ತಿದ್ದರು. ಅರ್ಥಧಾರಿಯು ಪದ್ಯದ ಸೀಮೆಯ ಒಳಗೆ ಕೆಲಸ ಮಾಡುವುದು ಅತ್ಯಾವಶ್ಯಕ. ಕವಿಯ

ಪದಪ್ರಯೋಗವನ್ನು ಸಾಧ್ಯವಾದಷ್ಟು ಮಟ್ಟಿಗೆ ಸಮರ್ಥಿಸುವುದು ಅವನ ಸಾಧನೆಯಾಗಿರಬೇಕು." ಇದರ ಕುರಿತು ಅವರು ಅನೇಕರಿಗೆ ಮಾರ್ಗದರ್ಶನ ಮಾಡಿದ್ದಾರೆ. ಇವುಗಳಲ್ಲಿ ಒಂದೆರಡು ವಿಷಯಗಳನ್ನು ಪರಿಶೀಲಿಸೋಣ.

### ಶ್ರೀರಾಮ–ಪಟ್ಟಾಭಿಷೇಕ ಪ್ರಸಂಗ:

ಮಂಥರೆ, ಕೈಕೆಯ ಬಳಿಗೆ ಬಂದು ರಾಮನಿಗೆ ರಾಜ್ಯಾಭಿಷೇಕವಾಗಲಿರುವ ವಾರ್ತೆಯನ್ನು ಅರುಹುತ್ತಾಳೆ. ನಾಳೆ ರಾಮಚಂದ್ರನಿಗೆ ಪಟ್ಟಾಭಿಷೇಕವಾದರೆ ನೀನು ದಾಸಿಯಾಗುವೆ ಎಂದು ತನ್ನ ಅಸಂತುಷ್ಟಿಯನ್ನು ವ್ಯಕ್ತಪಡಿಸುತ್ತಾಳೆ. ಆಗ ಸಿಟ್ಟುಗೊಂಡ ಕೈಕೆಯಿ

**ಪದ್ಯ: ಈ ಮಾತಾಡುವರೇ ಆಳಿ । ಏ ಹುಚ್ಚು ಮೂಳಿ । ಕಾಮಿನಿಯರೊಳ್ ನಿವಾಳಿ।**
**ಸುಮ್ಮಗೆ ಹೋಗೇ । ಮುದಿ ಗೂಗೆ ।ಸತ್ತ ಹಾಗೆ । ಚಾಡಿಯೇ ನಿನಗೆ ॥**

ಇದರಲ್ಲಿ ಬರುವ ಪದಗಳನ್ನು ಆಚಾರ್ಯರು ಸಮರ್ಥಿಸುವ ರೀತಿ ಪಾತ್ರ ಚಿತ್ರಣದ ಮತ್ತು ರಸಪುಷ್ಟಿಯ ದೃಷ್ಟಿಯಿಂದ ಎಷ್ಟು ಮನೋಹರ! 'ಮುದಿ ಗೂಬೆ!' "ಸೂರ್ಯೋದಯವನ್ನು ಸಮಸ್ತ ಲೋಕವೇ ಆತುರತೆಯಿಂದ ನಿರೀಕ್ಷಿಸಿಕೊಂಡಿರುತ್ತದೆ. ಆದರೆ ಗೂಬೆ ಮಾತ್ರ ಹಗಲ ಬೆಳಕಿನ ವಿರೋಧಿ. ಶ್ರೀರಾಮನೇ ರಾಜನಾಗಬೇಕೆಂದು ಜನ ಹಾರಯಿಸುತ್ತಿರುವಾಗ ನೀನು ಮಾತ್ರ ವಿರೋಧ ವ್ಯಕ್ತಪಡಿಸುತ್ತಿರುವೆ. ನೀನು ಮುದಿ ಗೂಬೆಯ ಸಾಲಿಗೇ ಸೇರಿದವಳು".

ಮುಂದೆ ಕೈಕೆಯಿಯು ಎರಡು ವರಗಳನ್ನು ಕೇಳಿದ ಕೂಡಲೇ ದಶರಥನು ಮೂರ್ಛಿತನಾಗುತ್ತಾನೆ. ಶೈತ್ಯೋಪಚಾರದಿಂದ ಎಚ್ಚೆತ್ತವನೇ ಕೈಕೆಯಿಯನ್ನು ಕುರಿತು, "ಕಂಬುಕಂಠಿನಿ ಚಾರುಶೀಲೆ..." ಎಂಬ ಹಾಡು. ಅದರಲ್ಲಿ ಬರುವ ಪ್ರತಿಯೊಂದು ಮಾತನ್ನೂ ಅವರು ಸಮರ್ಥಿಸುವ ರೀತಿ ಯಾವ ಸಹೃದಯನಿಗೂ ಹೃದಯಾನಂದವನ್ನು ಉಂಟುಮಾಡದೆ ಇರದು. "ಬಲಮುರಿ ಶಂಖದಂತಹ ಸುಮನೋಹರ ಕೊರಳು ನಿನ್ನದು. ಪ್ರಿಯೇ, ಶಂಖದಿಂದ ಮಂಗಲಕರವೂ ಸುಶ್ರಾವ್ಯವೂ ಆದ ಸ್ವರವೇ ಹೊರಡುವುದಲ್ಲದೆ, ಎಂದಾದರೂ ಅಪಸ್ವರ ಬರಬಹುದೇ? ಕೈಕಾದೇವಿ, ನಿನ್ನಂಥವಳ ಕಂಠದಿಂದ ಈ ತೆರನಾದ ಅಶುಭವಚನವೇ? ಎಂತಹ ಮನೋಹರವಾದ ನಡತೆಯುಳ್ಳವಳು ನೀನು! ಈ ನಡವಳಿಕೆ ನಿನಗೆ ಶೋಭೆಯೇ?..." ಹಾಡಿನ ಪದಗಳನ್ನು ಪ್ರತಿಪಾದಿಸಿ ಪಾತ್ರಪೋಷಣೆ ಮಾಡುತ್ತಿದ್ದ ಆಚಾರ್ಯರ ಅದ್ಭುತವಾದ ವ್ಯವಸಾಯಕ್ಕೆ ಈ ಮಾತುಗಳು ಬೆಳಕು ಚೆಲ್ಲುತ್ತವೆ.

ಆಚಾರ್ಯರು ಹಾಕಿಕೊಟ್ಟ ದಾರಿಯಲ್ಲಿ ಮುಂದುವರಿಯುವುದು ಬುದ್ಧಿವಂತ ಕಲಾವಿದನಿಗೆ ಸುಲಭಸಾಧ್ಯ. ಪಟ್ಟಾಭಿಷೇಕದ ವಾರ್ತೆ ತಿಳಿದು ಮಂಥರೆ ಕೈಕೆಯನ್ನು ಕುರಿತು ಹೀಗೆ ಹೇಳುತ್ತಾಳೆ –

**ಪದ್ಯ: ಬಾಲೆ ಕೇಳ್ ಪೂಮಾಲೆ ಚಾರು ।**
**ಶೀಲೆಯಿಂದು ನಿನ್ನ ಕಾಂತ ।ಭೂಲೋಕವ ರಾಮನಿಗೆ ಪಾಲಿಸಬೇಕೆಂದು ಹೀಗೆ ॥**

ಇಲ್ಲಿ 'ಪೂಮಾಲೆ' ಎಂಬ ಪದಪ್ರಯೋಗವಿದೆಯಷ್ಟೆ. "ಹೂವಿನ ಮಾಲೆ ಘಮಘಮಿಸುತ್ತಿರುವಾಗ ಅದನ್ನು ಮೆಚ್ಚಿ ಹೆಂಗಸರು ತಮ್ಮ ಅಲಂಕಾರಕ್ಕಾಗಿ ಸ್ವಾರ್ಥದಿಂದ



ಮುಡಿದುಕೊಳ್ಳುತ್ತಾರೆ. ಆದರೆ ಮರುದಿನ, ಅದು ಬಾಡಿದಾಗ ಅದನ್ನು ಕುಪ್ಪೆಗೆ ಎಸೆಯುತ್ತಾರೆ. ದಶರಥ ಮಹಾರಾಜರೂ ನಿನ್ನ ವಿಷಯದಲ್ಲಿ ಮಾಡಿದ್ದಿಷ್ಟೆ. ನಿನ್ನ ರೂಪ ಲಾವಣ್ಯಗಳ ಅವಶ್ಯಕತೆ ಇದ್ದಾಗ 'ನೀನು ನನ್ನ ಮೆಚ್ಚಿನ ಮಡದಿ' ಎಂದು ಹೊಗಳುತ್ತಿದ್ದರು. ನಿನ್ನ ಯೌವನ ಇಳಿಮುಖವಾದಾಗ ನೀನವರಿಗೆ ಬೇಡವಾದೆ. ಬಾಡಿದ ಹೂಮಾಲೆಯನ್ನು ಎಸೆಯುವಂತೆ ನಿನ್ನನ್ನೂ ತೊರೆದುಬಿಟ್ಟು, ಆಡಿದ ಮಾತಿಗೆ ತಪ್ಪಿ ರಾಮನಿಗೆ ಪಟ್ಟಗಟ್ಟುವ ಯೋಚನೆ ಮಾಡಿದರು. 'ಪೂಮಾಲೆ' ಎಂಬ ಒಂದು ಪದದ ಸಾರ್ಥಕತೆಯನ್ನು ವಿಶದೀಕರಿಸುವ ಈ ವಿಧಾನ ಯಕ್ಷಗಾನದ ಒಂದು ಸಮರ್ಥವಾದ ದಾರಿ. ಆಚಾರ್ಯರು ಈ ದಾರಿಯನ್ನು ಕ್ರಮಿಸಿದವರು. ದೀರ್ಘವಾದ ತಪಸ್ಸಿನ ಫಲವಾಗಿ ಅವರಿಗೆ ಇಂತಹ ಅರ್ಥಪೂರ್ಣವಾದ ಪದಗಳ ರಹಸ್ಯ ಹೊಳೆಯುತಿತ್ತು. ಅವರಾಡುವ ಮಾತುಗಳು ಹಿತಮಿತವಾಗಿದ್ದರೂ ಅವುಗಳಿಗೆ ತೂಕವಿತ್ತು. ಒಮ್ಮೆ ಕೇಳಿ ಮರೆತುಬಿಡುವ ವಾಕ್ಯಗಳು ಎಂದೂ ಅವರ ಬಾಯಿಯಿಂದ ಬರುತ್ತಿರಲಿಲ್ಲ.

### ಸುಭದ್ರಾ ಕಲ್ಯಾಣದ ಬಲರಾಮ

ಆಚಾರ್ಯರ ಬಲರಾಮನ ಪಾತ್ರ ಬಹಳ ವರ್ಷಗಳ ಅನಂತರವೂ ಸ್ಮೃತಿಪಟಲದಲ್ಲಿ ಹಸಿರುಹಸಿರಾಗಿ ನಿಲ್ಲುವ ಸ್ಥಿರಚಿತ್ರ, ಹೆಡ್ಡತನದಲ್ಲಿಯೂ ಮನೆಯ ಹಿರಿಯ ಯಜಮಾನಿಕೆಯ ದೊಡ್ಡಸ್ತಿಕೆಯನ್ನು ಮೆರೆಯುವ ಜಂಭತನದ ಅಪೂರ್ವ ಚಿತ್ರವದು.

ತೀರ್ಥಯಾತ್ರೆಗೆ ಹೊರಟ ಅರ್ಜುನನು ಸುಭದ್ರೆಯನ್ನು ಪಡೆಯುವ ಕಾತರತೆಯಿಂದ ದ್ವಾರಕೆಗೆ ಬರುತ್ತಾನೆ. ದ್ವಾರಕೆಯ ಹೊರಗಣ ವನದಲ್ಲಿ ತನ್ನ ಆಕಾಂಕ್ಷೆ ಈಡೇರುವುದನ್ನು ಕುರಿತು ಚಿಂತಿಸುತ್ತಾನೆ. ಇದನ್ನರಿತ ಶ್ರೀಕೃಷ್ಣ ಅವನನ್ನು ಪರಿಹಾಸ್ಯ ಮಾಡಿ ಕೊನೆಗೆ, "ಇರು ನೀನು ಯತಿವೇಷದಿ..." ಎಂದು ಹೇಳಿ ಅವನನ್ನು ಸಮಾಧಾನಪಡಿಸಿ ಅರಮನೆಗೆ ತೆರಳುತ್ತಾನೆ. ಊರ ಹೊರಗೆ ಸನ್ಯಾಸಿ ಬಂದಿರುವ ವಾರ್ತೆ ವನಪಾಲಕರಿಂದ ಬಲರಾಮನ ಕಿವಿಗೆ ಬೀಳುತ್ತದೆ. ಅವನಿಗೆ ಯತಿಗಳೆಂದರೆ ಅತೀವ ಗೌರವ. ತನ್ನ ಪರಿವಾರದೊಂದಿಗೆ ವನಕ್ಕೆ ಬಂದು ಅರ್ಜುನನನ್ನು ಯತಿಯೆಂದೇ ಬಗೆದು ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ, ಅರಮನೆಗೆ ಪಾಲಕಿಯಲ್ಲಿ ಕರೆದೊಯ್ಯುತ್ತಾನೆ. ಇಷ್ಟೊಂದು ಗದ್ದಲ ದ್ವಾರಕೆಯಲ್ಲಿ ನಡೆಯುತ್ತಿದ್ದರೂ ಅಲ್ಲಿ ಕೃಷ್ಣನಿಲ್ಲ. ಅದನ್ನು ಗಮನಿಸಿ ಬಲರಾಮ– "ಎಲ್ಲಿ ಪೋದನು ಕೃಷ್ಣ..." ಎಂದು ಗದರಿಸುವ ರೀತಿ, 'ಆವಾಗ ನೋಡಿದರು ಕಾಮಮೋಹಿತನಾಗಿ' ಹೆಂಗೆಳೆಯರ ಜೊತೆಯಲ್ಲಿ ಚಕ್ಕಂದವಾಡುತ್ತಿರುವ ಚಪಲತೆ – ಇವುಗಳನ್ನು ಆಚಾರ್ಯರು ಬಹು ಸುಂದರವಾಗಿ ವರ್ಣಿಸುತ್ತಿದ್ದರು. ಬಲರಾಮನ ವ್ಯಕ್ತಿತ್ವ ಇಲ್ಲಿ ಅತ್ಯಂತ ರಮಣೀಯವಾಗಿ ಅಭಿವ್ಯಕ್ತವಾಗುತ್ತಿತ್ತು. ಅಲ್ಲಿ ಪೊಳಲಿ ಶಂಕರನಾರಾಯಣ ಶಾಸ್ತ್ರಿಗಳ ಕೃಷ್ಣನ ಪಾತ್ರದ ಪ್ರವೇಶ. ಶ್ರೀಕೃಷ್ಣನ ತಂತ್ರಗಾರಿಕೆಯನ್ನು ಅವರಂತೆ ಹೊರಗೆಡಹಬಲ್ಲ ಇನ್ನೊಬ್ಬ ಅರ್ಥಧಾರಿಯನ್ನು ಇನ್ನೂ ಕಾಣಬೇಕಷ್ಟೆ. ಬಲರಾಮ–ಶ್ರೀಕೃಷ್ಣರ ಆಗಿನ ಸಂವಾದ ಯಕ್ಷಗಾನ ಸಾಹಿತ್ಯದಲ್ಲಿ ಒಂದು ಅಮರವಾದ ಸುಂದರ ಸೃಷ್ಟಿ. "ನಿನಗೆ ಗುರುಹಿರಿಯರೆಂಬ ಗೌರವವಿಲ್ಲ. ಸನ್ಯಾಸಿಗಳ ಮೇಲೆ ಪೂಜ್ಯಭಾವವಿಲ್ಲ" ಎಂದು ಬಲರಾಮ ರೇಗಿದರೆ, "ಇಂತಹ ಕಪಟಸನ್ಯಾಸಿಗಳು

ಲೋಕದಲ್ಲಿ ಎಷ್ಟಿಲ್ಲ! ಅವನ ಜಾತಿಯೇನು? ಕುಲವೇನು? ಎಂಬುದನ್ನು ನೀವು ವಿಚಾರಿಸಿದ್ದೀರಾ?" ಎಂದು ಕೃಷ್ಣನ ಆಕ್ಷೇಪ. "ಯತಿಗಳಿಗೆ ಜಾತಿ, ಕುಲಗಳಿವೆಯೇ? ಸರ್ವಸಂಗ ಪರಿತ್ಯಾಗ ಮಾಡಿದ ಅವರ ಕುಲಗೋತ್ರ ಕೇಳುವೆಯಾ" ಎಂದು ಬಲರಾಮ ಕೇಳಿದರೆ, ಕೃಷ್ಣ – ಕಪಟಸನ್ಯಾಸಿಯಾಗಿ ರಾವಣ ಸೀತೆಯನ್ನು ಹಾರಿಸಿದ ಉದಾಹರಣೆ ಕೊಡುತ್ತಾನೆ. ಅಲ್ಲದೆ ಪ್ರಾಯಪ್ರಬುದ್ಧೆಯಾದ ಸುಭದ್ರೆಯನ್ನು ಅವನ ಸೇವೆಗೆ ನಿಯೋಜಿಸಿದ್ದು ಶುದ್ಧ ತಪ್ಪೆಂದು ನಸುನಗುತ್ತಾ ಹೇಳುತ್ತಾನೆ. ಬಲರಾಮನ ಸಿಟ್ಟು ತಲೆಗೇರುತ್ತದೆ. "ಎಂತಹ ದುರಾಲೋಚನೆ ನಿನ್ನದು? ಎಲ್ಲರೂ ನಿನ್ನ ಹಾಗೆ ವಿಷಯಲಂಪಟರೆಂದು ಭಾವಿಸಿದೆಯಾ? ಶಿವಶಿವಾ! ಪೂಜ್ಯರಾದ ಯತಿಗಳ ವಿಷಯದಲ್ಲಿ ಇಂತಹ ಅಪಲಾಪವನ್ನು ಈ ಕಿವಿಗಳಲ್ಲಿ ಕೇಳುವಂತಾಯ್ತೇ!" ಎಂದು ಬಲರಾಮ ಕಿವಿಗಳನ್ನು ಕೈಗಳಿಂದ ಮುಚ್ಚಿಕೊಳ್ಳುತ್ತಾನೆ.

ಆಗ ಶ್ರೀಕೃಷ್ಣ– "ನನಗೇನು! ನೀವು ಏನು ಬೇಕಾದರೂ ಮಾಡಿ. ಸುಭದ್ರೆಯನ್ನು ಬೇಕಿದ್ದರೆ ಅವನಿಗೆ ಮದುವೆಮಾಡಿ ಕೊಡಿ. ಆದರೆ ಮತ್ತೆ ಮಾತ್ರ, 'ಕೃಷ್ಣಾ, ಹೀಗಾಯಿತು' ಎಂದು ನನ್ನನ್ನು ಕರೆಯಬೇಡಿ" ಎನ್ನುತ್ತಾನೆ. ಬಲರಾಮ–"ರಾಮ ರಾಮಾ! ಎಂತಹ ಮಾತುಗಳನ್ನು ಕೇಳುವಂತಾಯ್ತು! ನನ್ನಲ್ಲಿರುವ ಈ ಹಲಾಯುಧವನ್ನು ನೋಡು. ಇದು ನನ್ನ ಕೈಯಲ್ಲಿರುವವರೆಗೆ ಯಾರ ವಂಚನೆಯೂ ನನ್ನ ಮುಂದೆ ನಡೆಯುವಂತಿಲ್ಲ" ಎಂದು ವಾಗ್ವಾದಕ್ಕೆ ಮುಕ್ತಾಯ ಹಾಡುತ್ತಾನೆ. ಇಲ್ಲಿ ಧ್ವನಿ ಅಡಗಿರುವುದು, 'ಕೈಯಲ್ಲಿ ಹಲಾಯುಧ ಇರುವವರೆಗೆ' ಎಂಬ ಮಾತಿನಲ್ಲಿ. ಇತ್ತ ಸುಭದ್ರೆಯ ವಿವಾಹ ಸಿದ್ಧತೆ ನಡೆಯುತ್ತದೆ. ಕೌರವನ ದಿಬ್ಬಣ ಬಂದು, ಮದುವೆಯ ಮುಹೂರ್ತಕ್ಕೆ ಮುಂಚೆ ಆಕೆ ಸಂಪ್ರದಾಯದಂತೆ ಕಾಳಿಕಾಪೂಜೆಗೆಂದು ದೇವಿಯ ಗುಡಿಗೆ ಬರುತ್ತಾಳೆ. ಆಕೆಯ ಆಂತರ್ಯವನ್ನರಿತ ಅರ್ಜುನ ತನ್ನ ಸನ್ಯಾಸಿವೇಷವನ್ನು ಬಿಟ್ಟು ಅವಳೊಂದಿಗೆ ಪಲಾಯನ ಮಾಡುತ್ತಾನೆ. ಇದನ್ನರಿತ ಬಲರಾಮನು ತನ್ನ ಸೈನ್ಯದೊಂದಿಗೆ ಬೆನ್ನಟ್ಟಿ ಅರ್ಜುನನೊಂದಿಗೆ ಕಾದಾಡುತ್ತಾನೆ. ಬಲರಾಮನ ಹಲಾಯುಧವೇ ಕೈಯಿಂದ ತಪ್ಪಿಹೋಗಿ ಅವನು ನಿರಾಯುಧನಾಗುತ್ತಾನೆ.

ಆಗ ತಂತ್ರಗಾರ ಕೃಷ್ಣ ಪ್ರವೇಶಿಸಿ, "ಏನಿದು ಅವಾಂತರ ಅಣ್ಣಾ?"ಎಂದು ಏನೂ ಅರಿಯದವನಂತೆ ನಟಿಸಿ, ಅರ್ಜುನನು ಸುಭದ್ರೆಯೊಂದಿಗೆ ಪಲಾಯನ ಮಾಡಿದ ವಿಷಯವನ್ನು ತಿಳಿದ ಮೇಲೆ– "ಅಣ್ಣಾ, ನಿಮಗೆ ನಾನು ಮೊದಲೇ ಹೇಳಿಲ್ಲವೇ?" ಎಂದು ಪರಿಹಾಸ್ಯ ಮಾಡುತ್ತಾನೆ. ಇದು ಶ್ರೀ ಕೃಷ್ಣನದೇ ತಂತ್ರವೆಂದು ಆಗ ಬಲರಾಮನಿಗೆ ಅರಿವಾಗುತ್ತದೆ. ಅವನು ಸಿಟ್ಟುಗೊಂಡು, "ಯಾರು ನಿನ್ನನ್ನಿಲ್ಲಿಗೆ ಕರೆದವರು? ನಾನುಂಟು, ನನ್ನ ಹಲಾಯುಧವುಂಟು" ಎನ್ನುತ್ತಾನೆ. "ಎಲ್ಲಿಯಣ್ಣಾ ನಿಮ್ಮ ಹಲಾಯುಧ?" ಎಂದು ಕೃಷ್ಣ ಮೂದಲಿಸಿದಾಗ ಬಲರಾಮ ತಬ್ಬಿಬ್ಬಾಗುತ್ತಾನೆ. ತನ್ನ ಸೋಲನ್ನು ಒಪ್ಪದೆ ನಿರ್ವಾಹವಿಲ್ಲ. "ಹೆಣ್ಣು, ಹೊನ್ನು, ಮಣ್ಣು–ಯಾರ ಪಾಲಿಗೆ ಸೇರಬೇಕೆಂದು ವಿಧಿಲಿಖಿತವೋ ಅವು ಅವರವರ ಪಾಲಿಗೆ ಸೇರುತ್ತವೆ. ಇದಕ್ಕೆ ನಾವೇನು ಮಾಡಬಹುದು?" ಹೀಗೆ ಈ ಸನ್ನಿವೇಶ ಅತ್ಯಂತ ರಮಣೀಯವಾಗಿ ನಾಟಕೀಯತೆಯ ಸಾರಸರ್ವಸ್ವವಾಗಿ ಸಾಮಾಜಿಕರ ಮನ ಸೆಳೆಯುತ್ತದೆ. ಇಲ್ಲಿ ಆಚಾರ್ಯರ ಬಲರಾಮನೂ ಪೊಳಲಿ ಶಾಸ್ತ್ರಿಗಳ ಕೃಷ್ಣನೂ ಉಪಮಾತೀತ ಪಾತ್ರಗಳು.

ಆಚಾರ್ಯರ ಪಾತ್ರದ ಸ್ವಭಾವವನ್ನು ಚಿತ್ರಿಸುವ ಕೌಶಲವನ್ನು ಕಂಡಾಗಲೆಲ್ಲ ಕ್ಷೇಮೇಂದ್ರನ



'ಔಚಿತ್ಯ ವಿಚಾರ ಚರ್ಚಾ'ದ ನೆನಪಾಗುತ್ತದೆ. ಆತನು ಕಾವ್ಯಗಳಲ್ಲಿ 'ಔಚಿತ್ಯ'ವನ್ನು ಎತ್ತಿ ಹಿಡಿದ ಲಾಕ್ಷಣಿಕ. ತಾಳಮದ್ದಳೆಯಲ್ಲಿ ಪ್ರತಿಯೊಬ್ಬ ಕಲಾವಿದನಿಗೂ ತನಗೆ ಬೇಕಾದ ದಾರಿ ಹಿಡಿಯುವ, ಇಷ್ಟ ಬಂದಂತೆ ಶ್ಲೋಕಗಳ ಮೇಲೆ ಶ್ಲೋಕಗಳನ್ನು ಹೇಳಿ ಪಾಂಡಿತ್ಯ ಮೆರೆಯಿಸುವ ಪಥ ಸದಾ ತೆರೆದಿರುತ್ತದೆ. ಆದರೆ ಕಲಾವಿದರಿಗೆ ಔಚಿತ್ಯದ ಪ್ರಜ್ಞೆ ಅತ್ಯಾವಶ್ಯಕ. ತನ್ನ ಮಾತಿಗೆ ತಾನೇ ಕಡಿವಾಣವಿಕ್ಕುವ ಆತ್ಮಸಂಯಮವನ್ನು ಆತ ಬೆಳೆಯಿಸಲೇಬೇಕು. ಆಚಾರ್ಯರು ಈ ವಿಷಯದಲ್ಲಿ ಗುರಿ ತಲುಪಿದ ಮಹಾ ಸಂಯಮಿ. ಆ ಶಿಸ್ತು, ಆ ಸಂಯಮ, ಪ್ರಾಯಶಃ ನಾನು ಕಂಡ ಯಾವ ಕಲಾವಿದನಲ್ಲಿಯೂ ಇಲ್ಲ.

**iii. ಶ್ರೀಕೃಷ್ಣ ಸಂಧಾನದ ಭೀಮ–ದ್ರೌಪದೀ ಸಂವಾದ** (ಆಚಾರ್ಯ–ಎಂ.ಆರ್.ಶಾಸ್ತ್ರಿ ಜೋಡಿ):

ಎಂ. ಆರ್. ಶಾಸ್ತ್ರಿಗಳು ಹತ್ತು – ಹದಿನೈದು ಬಾರಿಯಾದರೂ ದ್ರೌಪದಿಯ ಅರ್ಥವನ್ನು ಹೇಳಿದ್ದಾರೆ. ಒಮ್ಮೆ ಪೊಳಲಿ ಶಂಕರನಾರಾಯಣ ಶಾಸ್ತ್ರಿಗಳ ಭೀಮನಿಗೂ ಮತ್ತೊಮ್ಮೆ ವೆಂಕಪ್ಪ ಶೆಟ್ಟರ ಭೀಮನಿಗೂ ದ್ರೌಪದಿಯಾಗಿ ಮಾತನಾಡುವ ಸಂದರ್ಭಗಳು ಅವರಿಗೆ ಒದಗಿತ್ತು. ಆದರೆ, ಆಚಾರ್ಯರ ಜೊತೆಯಲ್ಲಿ ಮಾತಾಡುವಾಗ ಎಂ.ಆರ್. ಶಾಸ್ತ್ರಿಗಳು ಮೈಮರೆತು ಮಾತಾಡುತಿದ್ದರು. ಕಾರಣ, ಆಚಾರ್ಯರ ಇದಿರು ಕೂತರೆ ಮಹಾಭಾರತದ ಸಾಕ್ಷಾತ್ ಭೀಮನೇ ಇವರೆಂಬ ಭಾವನೆ ಶಾಸ್ತ್ರಿಗಳ ಮನಸ್ಸಿನಲ್ಲಿ ಮೂಡುವಂತೆ ಮಾಡುತ್ತಿದ್ದರು. ವೆಂಕಪ್ಪ ಶೆಟ್ಟರ ಭೀಮನಿಗೆ, ದ್ರೌಪದಿಯ ಅರ್ಥ ಹೇಳುವುದು ಸುಲಭ.ಆದರೆ ಆಚಾರ್ಯರ ಭೀಮನಿಗೆ ದ್ರೌಪದಿಯ ಅರ್ಥ ಹೇಳಬೇಕಾದರೆ ಅವರ ಹಾಗೆಯೇ ಪಾತ್ರದಲ್ಲಿ ತನ್ಮಯತೆ ಹೊಂದುವ ಗುಣ ಬೇಕು. ಅವರ ಮಾತುಗಳಲ್ಲಿ ವಾಚ್ಯಾರ್ಥಕ್ಕಿಂತಲೂ ಧ್ವನಿಯೇ ಹೆಚ್ಚು. ಕೌರವರೊಂದಿಗೆ ಸಂಧಿಯಾಗುವುದು ತನಗೆ ಇಷ್ಟವಿಲ್ಲದಿದ್ದರೂ, ಅಣ್ಣ ಶ್ರೀಕೃಷ್ಣನನ್ನು ಕೌರವನ ಆಸ್ಥಾನಕ್ಕೆ ಐದು ಗ್ರಾಮಗಳನ್ನು ಯಾಚಿಸಲು ಕಳುಹಿಸುವ ಪ್ರಯತ್ನ ನಡೆಸಿದಾಗ ಅವನ ಅಂತರಂಗ ಕುದಿಯುವ ಬಾಣಲೆಯಾಗುತ್ತದೆ.ಆದರೆ ಮಾಡುವುದೇನು?ಅಣ್ಣನ ಮಾತನ್ನು ಮೀರುವುದೆ? ಆಗಿನ ಭೀಮನ ಹೊಟ್ಟೆಯ ಉರಿ ಅವರ ಮುಖಭಾವದಲ್ಲಿಯೇ ವ್ಯಕ್ತವಾಗುತ್ತಿತ್ತು. ಶ್ರೀಕೃಷ್ಣನು ಆತನನ್ನು ಕುರಿತು, "ಸಂಧಿಯ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?" ಎಂದು ಕೇಳಿದಾಗ ಬರುವ ಹಾಡೂ ಅರ್ಥಗರ್ಭಿತವಾಗಿದೆ –

**ಅಣ್ಣನವರಿಗೆ ನೀತಿಯಾದರೆ ।**
**ನಿನ್ನ ಮನಕೊಪ್ಪಿದರೆ ಭೂತಳ ।**
**ವನ್ನು ಕೌರವನಿತ್ತರೆನಗೇ । ನಿನ್ನು ದುಗುಡ ॥**

ದೀರ್ಘವಾದ ಅರ್ಥ ವಿವರಣೆಯಿಂದ ಕೆಲವರು ಇದರ ಸ್ವಾರಸ್ಯ ಕೆಡಿಸುತ್ತಾರೆ. ಪದ್ಯದ ಧ್ವನಿಯನ್ನು ಅಡಗಿಸಿಬಿಡುತ್ತಾರೆ. ಆಚಾರ್ಯರಾದರೋ ಅದರ ಸ್ವಾರಸ್ಯ ಕೆಡದಂತೆ ಒಂದೇ ವಾಕ್ಯದಲ್ಲಿ ಅರ್ಥ ಪೂರಯಿಸಿ ಎದೆಗೆ ಹೊಡೆದುಕೊಳ್ಳುವ ದೃಶ್ಯ ಇಂದಿಗೂ ದೃಗ್ಗೋಚರವಾಗುತ್ತಿದೆ–"ಸಕಲ ಧರ್ಮಶಾಸ್ತ್ರಗಳನ್ನೂ ಅಭ್ಯಸಿಸಿದ ಅಣ್ಣನಿಗೆ ಆತತಾಯಿಯಾದ ಸುಯೋಧನನೊಂದಿಗೆ ಸಂಧಿ ಮಾಡುವುದು ಧರ್ಮ ಸಮ್ಮತವೆಂದು ಕಂಡುಬಂದರೆ, ಮಾವನೆಂಬ ಸಂಬಂಧವನ್ನೂ ಬಗೆಯದೆ ದುಷ್ಟನಾದ ಕಂಸನನ್ನು ವಧಿಸಿದ

ನಿನಗೆ ಇದು ಸರಿಯೆಂದು ಕಂಡುಬಂದರೆ, ಸೂಜಿಯ ಮೊನೆಯೂರುವಷ್ಟು ಸ್ಥಳವನ್ನೂ ಸಾಮದಿಂದ ಕೊಡೆನೆಂದು ಹೇಳಿಕಳುಹಿಸಿದ ಕೌರವನು ಐದು ಗ್ರಾಮಗಳನ್ನು ಕೊಡುವನೆಂದಾದರೆ ಇದರಿಂದ ನನಗೇನು ಬಂದ ದುಃಖ?" – ಇಲ್ಲಿ ಆಚಾರ್ಯರು ಎದೆಗೆ ಕೈಯಿಂದ ಹೊಡೆದುಕೊಂಡು, ಅವರ ಹೃದಯದ ಉಮ್ಮಳ, ಅಣ್ಣ ತನ್ನ ಪೌರುಷ ಪ್ರದರ್ಶನಕ್ಕೆ ಮತ್ತು ಪ್ರತಿಜ್ಞಾಪೂರಣಕ್ಕೆ ಒಡ್ಡುವ ವಿಘ್ನ ಇವುಗಳಿಂದ ಉರಿಮಸಗುವ ದೃಶ್ಯ ಮಾತುಗಳಿಗಿಂತಲೂ ಹೆಚ್ಚಾಗಿ ಭಾವ–ಭಂಗಿಗಳಿಂದಲೇ ಅಭಿವ್ಯಕ್ತವಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ಹೆಚ್ಚು ಮಾತು ರಸದ ದೃಷ್ಟಿಯಿಂದ ಅನಾವಶ್ಯಕ ಮಾತ್ರವಲ್ಲ, ದೋಷಕರ.

ಭೀಮನು ಶ್ರೀಕೃಷ್ಣನನ್ನು ಕೌರವನಲ್ಲಿಗೆ ಸಂಧಿಗೆ ಕಳುಹಿಸುವ ವಿಚಾರವನ್ನು ದ್ರೌಪದಿಗೆ ಅರುಹುತ್ತಾನೆ. 'ಆತನೊಳ್ಳೆದೂರೀತನು ಬೇಡುವ' ಸಂಗತಿಯನ್ನು ತಿಳಿಸಿ, 'ನಾವೆಲ್ಲವರಿದಕೆ ಒಪ್ಪಿಹೆವೀ ವಿಷಯೋತ್ಸವಕೆ' ಎಂದಾಗ ಆಕೆಯ ಮೊಗ ಬಾಡುತ್ತದೆ. ಅವಳು 'ಸಂಧಿಯೇ ಕಲಿಭೀಮ ನಿನಗಾನಂದವೇ...'ಎಂಬ ಪದ್ಯಕ್ಕೆ ಅರ್ಥ ಹೇಳುವಾಗ, "ವಲ್ಲಭಾ! ಸುಯೋಧನನಲ್ಲಿ ಸಂಧಾನವೆಸಗುವಿರಾ? ಇದರಿಂದ ನಿಮಗೆ ಸಂತೋಷವೇ?"ಎಂದು ಶಾಸ್ತ್ರಿಗಳ ದ್ರೌಪದಿ ಕೇಳಲೇ ಬೇಕಲ್ಲಾ, ಆಗ ಆಚಾರ್ಯರು, "ಪಾಂಚಾಲೀ, ನನಗೆ ಸಂತೋಷವೆಂದು ನಿನಗೆ ಯಾರು ಹೇಳಿದರು?" ಎಂದು ಆರ್ಭಟಿಸುತ್ತಾರೆ. ಇದಕ್ಕೆ ದ್ರೌಪದಿ ಏನು ಹೇಳಬೇಕು? ಸಂಧಾನದಲ್ಲಿ ಸಂತೋಷವಿಲ್ಲವೆಂಬ ಭೀಮನ ಸ್ವಭಾವವನ್ನು ಅವರ ಮಾತು ಹೊರಗೆಡಹುತ್ತದೆ. ಆದರೆ ದ್ರೌಪದಿ ಈ ಸಂವಾದದ ರಸವಾಹಿನಿಯನ್ನು ಮುಂದುವರಿಸುವುದು ಹೇಗೆ? "ನಿನಗೆ ಐವರು ಗಂಡಂದಿರಿದ್ದೂ ಆರನೆಯವನಲ್ಲಿ ಮನಸ್ಸಾಗಿದೆ ಎಂದು ನಿನ್ನ ಅಣ್ಣನಲ್ಲಿ ಹೇಳಿದವಳು ನೀನು. ಈಗ ನಿನಗೆ ಆ ಆರನೆಯವನಿಲ್ಲವೇ? ಹೋಗು–ಅವನ ಬಳಿಗೆ" ಎಂದು ಮಾತಿಗೆ ಸುಲಭದಲ್ಲಿ ಉತ್ತರ ಕೊಡಬಹುದು. ಆದರೆ ಭೀಮನ ನಿಜವಾದ ಅಂತರಂಗವನ್ನು ಹೊರಗೆಡಹುವ ಈ ಮಾತಿಗೆ ಸರಿಯಾದ ಉತ್ತರ ಕೊಡುವುದು ಬಹು ಪ್ರಯಾಸದ ಕಾರ್ಯ–"ಇದರಿಂದ ನಿಮಗೆ ಆನಂದವಾಗಿದೆ ಎಂಬುದನ್ನು ಯಾರು ಯಾಕೆ ಹೇಳಬೇಕು? 'ನಾವೆಲ್ಲವರಿದಕೆ ಒಪ್ಪಿಹೆವೀ ವಿಷಯೋತ್ಸವಕೆ' ಎಂದು ನೀವೇ ಹೇಳಿದಿರಲ್ಲಾ. ತನಗೆ ಆನಂದವನ್ನುಂಟು ಮಾಡದ ವಿಷಯವನ್ನು ಯಾವ ಮನುಷ್ಯನೂ–ಒಪ್ಪಿಕೊಳ್ಳಲಾರ. ಅದರಲ್ಲಿಯೂ, ನಿಮ್ಮ ಸಹೋದರರೂ ಒಪ್ಪಿದ್ದಾರೆ. ಶ್ರೀಕೃಷ್ಣನೂ ಸಮ್ಮತಿಸಿ ಹಸ್ತಿನಾವತಿಗೆ ಹೊರಟಿದ್ದಾನೆ. ಒಟ್ಟಿನಲ್ಲಿ ಪಾಂಡು ಕುಮಾರರು ಸನ್ಯಾಸದೀಕ್ಷೆ ವಹಿಸಿಕೊಂಡರೆಂದು ಲೋಕವೇ ಹೇಳುವಂತೆ ಮಾಡಿದಿರಿ" ಎಂದು ದ್ರೌಪದಿ ಆ ಸಂದರ್ಭದಲ್ಲಿ ನುಣುಚಿಕೊಳ್ಳಬೇಕಾಗುತ್ತದೆ. "ನಾವು ಸಹೋದರರು ಒಂದಾಗಿರಬೇಕೆಂಬುದು ಅಣ್ಣನ ಮತ. ಇದು ಉದಾತ್ತ ವಿಷಯ. ನೀನು ನಮ್ಮನಮ್ಮೊಳಗೆ ಒಡಕನ್ನುಂಟು ಮಾಡುವ ಕೆಲಸಕ್ಕೆ ಕೈಹಾಕಬಹುದೇ?" – ಹೀಗೆ ಬಹು ಸ್ವಾರಸ್ಯವಾಗಿ ಸಂಭಾಷಣೆ ಮುಂದುವರಿಯುತ್ತದೆ. ಇಲ್ಲಿ ಮಾತಿನಲ್ಲಿ ಸೋಲು ಗೆಲವಿನ ಪ್ರಶ್ನೆಯಲ್ಲ. ಸಂಭಾಷಣೆಯನ್ನು ಸನ್ನಿವೇಶದ ಚೌಕಟ್ಟಿನಲ್ಲಿ ನೆಯ್ದು ಪಾತ್ರಚಿತ್ರಣ ಮಾಡುವ ಜಾಣ್ಮೆ ಎದ್ದು ತೋರಬೇಕು.



## ಕರ್ಣಪರ್ವದ ಧರ್ಮರಾಯ

ಆಚಾರ್ಯರು ನಿರ್ವಹಿಸಿದ ಪಾತ್ರಗಳು ಅನೇಕ. ಆದರೆ ಇಂದಿಗೂ ಹಳೆಯ ತಲೆಮಾರಿನವರು ಪ್ರಶಂಸಿಸುವ ಪಾತ್ರವೆಂದರೆ ಕರ್ಣಪರ್ವದಲ್ಲಿ ಬರುವ (ಶಿಬಿರದ) ಧರ್ಮರಾಯ. ಅದು ಅವರ ಅರ್ಥಗಾರಿಕೆಯ ಕಲೆಯ ಕೌಶಲಕ್ಕೆ ಒಂದು ಜ್ವಲಂತ ನಿದರ್ಶನ. ಕರ್ಣನ ಶರಹತಿಯಿಂದ ಜರ್ಜರಿತನಾದ ಯುಧಿಷ್ಠಿರನನ್ನು ಶಿಬಿರಕ್ಕೆ ಒಯ್ಯುತ್ತಾರೆ. ಯುಧಿಷ್ಠಿರ ಪ್ರಜ್ಞಾಹೀನನಾಗಿದ್ದಾನೆ. ಶ್ರೀಕೃಷ್ಣನು ಕರ್ಣವಧೆಗಾಗಿ ಅರ್ಜುನನನ್ನು ಕರೆದುಕೊಂಡು ಸಂಶಪ್ತಕರೊಡನೆ ಯುದ್ಧಕ್ಕಾಗಿ ಹೋಗಿದ್ದ. ಕರ್ಣನು ಶಲ್ಯಸಾರಥ್ಯದಲ್ಲಿ ವಿಜೃಂಭಿಸುತ್ತಿದ್ದ ದಿನವದು. ಧರ್ಮರಾಯನು ಕರ್ಣನ ಇದಿರು ಬಿದ್ದು, ಘಾಸಿಪಟ್ಟು ಅರ್ಜುನನು ಉದ್ರೇಕಗೊಳ್ಳುವಂತೆ ಮಾಡುವುದೇ ಶ್ರೀಕೃಷ್ಣನು ಹೂಡಿದ ತಂತ್ರ. 'ಸೇನೆಯು ತೆರಳುವ ಹದನ'ವನ್ನು ಕಂಡು ದಾನವರಿಪು ಕೃಷ್ಣನು ಪಾರ್ಥನನ್ನು ಶಿಬಿರದ ಕಡೆಗೆ ಕರೆತರುತ್ತಾನೆ. ಅಲ್ಲಿ ನೋಡಿದ ದೃಶ್ಯವೇನು? ಅಸಹನೀಯವಾದ ನೋವಿನಿಂದ ನರಳುವ ನೃಪನ ಯಾತನಾಮಯವಾದ ಸ್ಥಿತಿ. ತನ್ನ ಬರಿಯ ಮುಖಭಾವದಿಂದಲೇ ಆಚಾರ್ಯರು ತನ್ನ (ಪಾತ್ರದ) ಆಗಿನ ಸ್ಥಿತಿಯನ್ನು ಸಾಮಾಜಿಕರು ಅರಿಯುವಂತೆ ಮಾಡುತ್ತಿದ್ದರು. 'ಅಯ್ಯೋ ಪಾಪ' ಎಂದು ಪ್ರತಿಯೊಬ್ಬರೂ ಅನುಕಂಪ ಪಡುವಂತಿತ್ತು ಅವರ ಪರಿಸ್ಥಿತಿ.

**ಪದ್ಯ: ಅಂಗವನಲುಗಿಸುತೆದ್ದು ಕು**
**ರಂಗವಿಲೋಚನೆಯಳ ಮೇಲೊರಗುತ ಭೂಪಂ ॥**
**ತುಂಗ ಪರಾಕ್ರಮಿ ಪಾರ್ಥಂ**
**ಕಂಗಳಿದಿರು ಕಾಣಲು ಬಳಿಕವನೊಡನೆಂದಂ ॥**

ಈ ಪದ್ಯಕ್ಕೆ ಆಚಾರ್ಯರ ಅರ್ಥ – ನೀರು ತುಂಬಿದ ಕಣ್ಣುಗಳನ್ನು ಅರೆದೆರೆದು, ಹೂಂ... ಯಾರೇ... ಪಾಂ... ಚಾ...ಲಿ... ಸ್ವ...ಲ್ಪ... ಹೀ... ಗೆ... ಕೂಡ್ರೆ... ನ... ನ್ನ... ನ್ನು ಸ್ವ... ಲ್ಪ... ಆ... ಧ... ರಿ... ಸು ಯಾರದು? ಶ್ರೀ ಕೃಷ್ಣಸ್ವಾಮಿಯೇ? ಸಾವು ನೋವಿನ ಸುಳಿವಿಲ್ಲದ... ಸುಖದ... ಸಾಮ್ರಾಜ್ಯದಲ್ಲಿ ಈ ತನಕ... ವಿಹರಿಸುತಿದ್ದೆ (ಎಂದು ಅಳುತ್ತಾ) ಪುನಃ ಈ ನೋವಿನ ಪ್ರಪಂಚಕ್ಕೆ ಯಾಕೆ ಎಳೆದು ತಂದೆ? (ಅರ್ಜುನನನ್ನು ನೋಡಿ), "ಅದ್ಯಾರು ಪಾರ್ಥನೋ? ಬಂದೆಯಾ?"

**ಪದ್ಯ: ಬಂದೆಯ ಪಾರ್ಥ ನೀನು। ಸಮುಸಪ್ತಕ ।ರಿಂದಲ್ಲಿ ಬಿಟ್ಟರೇನು। ಸಂಗ್ರಾಮದಿ।**
**ನೊಂದು ಬಿದ್ದಿರುವೆ ನಾನು । ಪೋದಲ್ಲಿ ನೀನು ॥**
**ಚಂದವಾದುದೆ ರಣದೊಳಾ ರವಿ ।ನಂದನಗೆ ಹದನೇನು ಮಾಡಿದೆ ।**
**ಕೊಂದೆಯೋ ಮಿಗೆ ಸಲಹಿದೆಯೊ ಮೇ। ಣೆಂದು ನುಡಿ ನುಡಿ ತಡೆಯದೀಕ್ಷಣ॥**

ಪಾರ್ಥಾ! ಸಂಶಪ್ತಕರೊಂದಿಗೆ ಯುದ್ಧಕ್ಕೆ ಹೋದವನಲ್ಲವೇ ನೀನು? ಅವರು ಮಹಾ ವಿರೋಧ ಸ್ವಭಾವದವರು. ಅವರ ಹಿರಿಯರಾದ ನಿವಾತಕವಚರನ್ನು ಕೊಂದವನಲ್ಲವೇ ನೀನು?ಅವರು ಇದನ್ನು ಎಂದೂ ಮರೆಯುವವರಲ್ಲ. ನಿನ್ನನ್ನು ಜೀವದಿಂದ ಬರುವುದಕ್ಕೆ ಅವರು ಬಿಟ್ಟರೇನೊ? ಬರುವಾಗ ದಾರಿಯಲ್ಲಿ ಕರ್ಣ ಸಿಕ್ಕಿದನೆ? ಅವನಿಗೇನು ಮಾಡಿ

ಬಂದೆ? ಯುದ್ಧ ಮಾಡಿ ಕೊಂದು ಬಂದೆಯಾ? ಅಥವಾ ಅವನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡು ಬಂದೆಯಾ? ಹೇಳು."

ಇಲ್ಲಿ ಆಚಾರ್ಯರ ಒಂದೊಂದು ಮಾತೂ ನಂಜಿನ ಸೂಜಿಯಂತೆ ಎದೆಗೆ ನಾಟುವಷ್ಟು ತೀಕ್ಷ್ಣವಾದುದು. ಅದು ಅವರು ಅನುಭವಿಸುತಿದ್ದ ಅಸಹ್ಯ ವೇದನೆಯನ್ನು ಎತ್ತಿ ತೋರಿಸುತಿದ್ದವು. 'ಕರ್ಣನನ್ನು ಕೊಂದು ಬಂದೆಯಾ?'ಎಂಬ ಅವರ ವಕ್ರೋಕ್ತಿಯ ಸೊಬಗನ್ನು ಅವರ ಬಾಯಿಯಿಂದಲೇ ಕೇಳಬೇಕು. ಆಗ ಅರ್ಜುನನು ತಾನು ಸಂಶಪ್ತಕರೊಡನೆ ಯುದ್ಧ ಮಾಡಿದ ರೀತಿಯನ್ನು ವಿವರಿಸುತ್ತಾನೆ. ಅಣ್ಣನಿಗಾದ ಅಪಾಯವನ್ನು ಕೇಳಿ ಕೂಡಲೇ ಬಂದುದಾಗಿಯೂ, ದಾರಿಯಲ್ಲಿ ಅನೇಕರೊಂದಿಗೆ ಯುದ್ಧ ಮಾಡಿದ್ದಾಗಿಯೂ, ರಾಧೇಯನನ್ನು ಮಣ್ಣುಮುಕ್ಕಿಸುವುದಾಗಿಯೂ ಅರುಹುತ್ತಾನೆ. ಆಗ ಧರ್ಮರಾಯನ ಬಾಯಿಯಿಂದ ಬರುವ ಮಾತುಗಳಿವು–

**ಪದ್ಯ: ಬಾಯಿಂದ ಬಗುಳಿದರೆ। ಕಾರ್ಯವು ತನ್ನ। ದಾಯಿತೆ ಪೊಗಳಿದರೆ। ಪೌರುಷದಂಗ। ದಾಯತಿಕೆಗಳೆ ಬೇರೆ। ತಾ ನೆಗಳ್ದರೆ॥**

"ಸಾಕುಮಾಡು ನಿನ್ನ ಪೌರುಷದ ಮಾತುಗಳನ್ನು. ಭಾರೀ ಯುದ್ಧಮಾಡಿದ್ದಾನಂತೆ. ಪ್ರತಿಭಟಿಸುವವರಿಲ್ಲದಲ್ಲಿ ನಿನ್ನ ಶೌರ್ಯಕ್ಕೆ ಕಡಿಮೆಯಿಲ್ಲ. ಆದರೆ ನಿನ್ನ ಒಣ ಜಂಭ ರಾಧೇಯನಿದಿರಲ್ಲಿ ನಡೆಯುವುದೆಂದು ಭಾವಿಸಿದೆಯಾ? ಲೋಕದಲ್ಲಿ ಪರಾಕ್ರಮಿಯೆಂದರೆ ಕರ್ಣ. ಅವನಿಗೆ ಸಮಾನರಾರು?" ಹೀಗೆ ಧರ್ಮರಾಯ–ಅರ್ಜುನರ ಸಂಭಾಷಣೆ ಮುಂದುವರಿಯುತ್ತದೆ. ಕೊನೆಗೆ – 'ಇವರ ನಂಬಿದವರಿಗೆ ದೇಶಾಂತರವೆ ಗತಿ...' ಎಂಬ ಪದ್ಯಕ್ಕಂತೂ ಕರುಳೇ ಕಿತ್ತುಬರುವಂತೆ ಆಚಾರ್ಯರು ಅರ್ಥವಿಸುತ್ತಿದ್ದರು.

ಅರ್ಜುನನು ಧರ್ಮರಾಯನನ್ನು ಸಂತಯಿಸಲು ಶತಪ್ರಯತ್ನ ಮಾಡುತ್ತಾನೆ. ತಾನು ಇಲ್ಲಿ ಬರುವ ಮೊದಲು ಎಷ್ಟು ದಣಿದೆನೆಂಬುದಕ್ಕೆ ಶ್ರೀಕೃಷ್ಣನೇ ಸಾಕ್ಷಿ ಎಂದು ಬಿನ್ನವಿಸುತ್ತಾನೆ. ಅದಕ್ಕೆ ಯುಧಿಷ್ಠಿರನು

**ಪದ್ಯ: ...ಎನಲು ಕೇಳ್ದಾ ನೃಪತಿ ಕನಲಿದು। ತನು ವಿಭಾಡಿಸಿ ನುಡಿದ ನೆಲವೊ। ಘನ ಮದಾಂಧನೆ ದಣಿದೆಯೈ ತಪ್ಪೇನುತಪ್ಪೇನು॥ ಅನುಜನಾದೊಡೆ ಎನ್ನ ಹರಿಬವ। ನೆನೆದುರಿಪು ಸೂತಜನ ಕೊಲ್ಲದೆ। ಜುನುಗಿ ಬಪ್ಪೆಯ ಸಾಕು ಸುಡು ಗಾಂಡೀವವಿದನೆಂದ...**

ಇದಕ್ಕೆ ಅರ್ಥ ಹೇಳುವಾಗ ಆಚಾರ್ಯರ ಮಾತುಗಳಲ್ಲಿ ತಾತ್ಸಾರಭಾವ, ಕ್ರೋಧಭಾವ ಮತ್ತು ತಾನು ಅನುಭವಿಸುವ ವೇದನೆಗಳು ಮುಪ್ಪುರಿಗೊಂಡು ಹರಿಯುತ್ತಿದ್ದವು. "ಸುಡು ಗಾಂಡೀವವಿದನು" ಎಂಬುದಕ್ಕೆ ಆಚಾರ್ಯರು ನೇರವಾಗಿ 'ಸುಡು' ಎನ್ನುತ್ತಿರಲಿಲ್ಲ. "ಗಾಂಡೀವವನ್ನು ಧರಿಸಲು ಯಾರು ಯೋಗ್ಯರೋ ಅಂಥವರ ಕೈಯಲ್ಲಿಯೇ ಅದು ಶೋಭಿಸಬೇಕು. ಅಗ್ನಿದತ್ತವಾದ ಬಿಲ್ಲು – ಅಗ್ನಿಯ ಕೈಯಲ್ಲಿಯೇ ಅದರ ಎಸಕ. ನಿನ್ನಂಥವನ ಕೈಯಲ್ಲಿರಲು ಅದು ಸರ್ವಥಾ ಅನರ್ಹ. ಆದ್ದರಿಂದ ಅದನ್ನು ಅಗ್ನಿಗೆ ಮರಳಿಸು" ಎನ್ನುತ್ತಿದ್ದರು.

["ಗಾಂಡೀವವನ್ನು ಅಗ್ನಿಗೆ ಮರಳಿಸು" ಎನ್ನುವ ಮಾತು ಇನ್ನೊಮ್ಮೆ ಅದನ್ನು ಪಡೆಯಬಹುದು ಎಂದಾಗುತ್ತದೆ. ಇದರಿಂದ ಧ್ವನಿ ಶಕ್ತಿಯ ರಹಸ್ಯವನ್ನು ಅವರು ಎಷ್ಟರ ಮಟ್ಟಿಗೆ ತಿಳಿದಿದ್ದರೆಂಬುದನ್ನುಊಹಿಸಬಹುದು.]



ಅನಂತರದ ಕಥೆ – ಅರ್ಜುನನು ಸಿಟ್ಟೇರಿ ಅಣ್ಣನನ್ನು ತನ್ನ ಪ್ರತಿಜ್ಞೆಯಂತೆ ಕೊಲ್ಲಲು ಹೋಗುತ್ತಾನೆ. ಕೃಷ್ಣನು ಅವನನ್ನು ತಡೆಯಲು ಯತ್ನಿಸಿದಾಗ ಯುಧಿಷ್ಠಿರನು "ತಡೆಯದಿರು ಮುರಮಥನನಿವನು ಸಾಹಸಿ ಕಣಾ..." ಎಂಬ ಪದ್ಯಕ್ಕೆ ಆಚಾರ್ಯರು ಅರ್ಥ ಹೇಳುವ ರೀತಿ, ಕರುಣರಸದ ತೊರೆಯೇ ಉಕ್ಕಿ ಹರಿಯುವಂತೆ ಮಾಡುತ್ತದೆ. "ಕೃಷ್ಣಾ, ತಡೆಯಬೇಡ ಪಾರ್ಥನನ್ನು. ಮೂರು ಲೋಕಗಳಲ್ಲಿಯೂ ತನ್ನ ವಿಕ್ರಮದ ಪತಾಕೆಯನ್ನು ಹಾರಿಸಿದ ಮಹಾ ಪರಾಕ್ರಮಶಾಲಿ ಈತ. ಅವನ ಶೌರ್ಯದ ಸೌಧಕ್ಕೆ ಕಲಶವಿಡುವ ಒಂದು ಕಾರ್ಯ ಮಾತ್ರ ಉಳಿದದ್ದು. ಈಗ ಅದನ್ನು ಮಾಡಿ ಪೂರಯಿಸ ಹೊರಟಿದ್ದಾನೆ. ಅವನ ಪ್ರತಾಪಾಗ್ನಿಯ ಜ್ವಾಲೆಗೆ ತಣ್ಣೀರೆರೆಯಬೇಡ" ಎಂದು ಕಂಬನಿದುಂಬಿ, ಮೈಮರೆತು, ಆಡುವ ಮಾತುಗಳ ರಸದ ಓಕುಳಿಯಲ್ಲಿ ಹಲವು ರಸಿಕರು ಮಿಂದುಸುಖಾನುಭವವನ್ನು ಪಡೆದಿದ್ದಾರೆ. ಅರ್ಜುನನದೊಂದು ಪ್ರತಿಜ್ಞೆ–"ಗಾಂಡೀವವನ್ನು ನಿಂದಿಸಿದವನು ಯಾರೇ ಆಗಲಿ, ತಕ್ಷಣ ಅವನನ್ನು ಕೊಲ್ಲುತ್ತೇನೆ", ಎಂದು. ಆದ್ದರಿಂದ ಧರ್ಮರಾಯನನ್ನಾದರೂ ಕೊಲ್ಲಲೇ ಬೇಕಲ್ಲವೆ? ಇಲ್ಲವಾದರೆ ಪ್ರತಿಜ್ಞಾಭಂಗವಾಗುವುದಲ್ಲವೆ? ಈ ಪ್ರತಿಜ್ಞೆಯನ್ನು ಪೂರಯಿಸುವುದಕ್ಕಾಗಿ ಕೃಷ್ಣನು ಉಪಾಯದಿಂದ ಅರ್ಜುನನನ್ನು ತಡೆದು, "ನಿಂದಿಸಿದರೆ ಕೊಂದಂತಾಗುವುದು" ಎಂದು ಉಪದೇಶ ಮಾಡುತ್ತಾನೆ.

ಅದರಂತೆ ಅರ್ಜುನನು–"ಎಲೆ ಷಂಡ ನೃಪತಿ, ನಿನ್ನೊಡಹುಟ್ಟಲೆಮಗೆಲ್ಲ ಹಲವಂಗದಲಿ ಕಷ್ಟವೈ..."ಎಂದು ನಾನಾರೀತಿಯಲ್ಲಿ ನಿಂದಿಸುವುದು, ಯುಧಿಷ್ಠಿರನ ಹೃದಯವನ್ನು ಹಿಂಡಿ ಹಿಪ್ಪೆ ಮಾಡುತ್ತದೆ. ಭ್ರಾತೃವಧೆಯ ದೋಷಕ್ಕೆ ಗುರಿಯಾದೆನೆಂದು ಅರ್ಜುನನು ಆತ್ಮಹತ್ಯೆ ಮಾಡಿಕೊಳ್ಳಲುಜ್ಜುಗಿಸಿದಾಗ ಪುನಃ ಕೃಷ್ಣನ ಉಪದೇಶ – 'ತನ್ನನ್ನು ತಾನು ಹೊಗಳಿಕೊಂಡರೆ ಕೊಂದುಕೊಂಡಂತೆ' ಎಂದು ಹೇಳುತ್ತಾನೆ. ಅರ್ಜುನನು ಆತ್ಮ ಸ್ತುತಿಗೆ ಪ್ರಾರಂಭಿಸುತ್ತಾನೆ. ಈ ಆತ್ಮಸ್ತುತಿಯ ಮಾತುಗಳೂ ಪರ್ಯಾಯವಾಗಿ ಧರ್ಮರಾಯನನ್ನು ನಿಂದಿಸುವವುಗಳೇ.

ಇವುಗಳನ್ನಾಲಿಸಿದ ಎಂತಹವನಿಗೂ ವೈರಾಗ್ಯ ಬರಲೇಬೇಕು; ಆಚಾರ್ಯರ ಪಾಲಿಗೆ ಇದು ತನ್ನ ಬಾಳಿನ ನೈಜ ಚಿತ್ರಣ. ಬಡತನದ ಬೇಗುದಿಯಲ್ಲಿ ನೊಂದು ಬೆಂದು ತತ್ತರಿಸಿದ ಜೀವ. ಒಪ್ಪೊತ್ತು ಉಂಡರೂ, ಹೊಟ್ಟೆಯ ಪಾಡಿಗಾಗಿ ಯಾವತ್ತೂ ಅನ್ಯರಲ್ಲಿ ಚಾಚದ ಕೈ. ಅಭಿಮಾನವೇ ಬಾಳಿನ ಸಾರಸರ್ವಸ್ವವೆಂದು, ದುಃಖವನ್ನು ಅನ್ಯರಲ್ಲಿ ನಿವೇದಿಸಿಕೊಳ್ಳದ ಅಭಿಮಾನಧನರು. ಎಷ್ಟೋ ವೇಳೆ ಸಂಸಾರತ್ಯಾಗ ಮಾಡುವ ವೈರಾಗ್ಯ ಅವರಲ್ಲಿ ಮೂಡಿರಬೇಕು. ಇದರಿಂದಾಗಿಯೇ ಈ ಸನ್ನಿವೇಶದಲ್ಲಿ ಕಣ್ಣೀರು ತುಂಬಿ,

**ಪದ್ಯ: ದಾನವಾರಿ ಮಾತ ಲಾಲಿಸೊ । ಸುಪ್ರೇಮದಿಂದ । ಲೀ ನರಂಗೆ ಮತಿಯ ಪಾಲಿಸೊ॥**

ಎಂಬ ಪದ್ಯಕ್ಕೆ ಅವರು ಅರ್ಥ ಹೇಳುವಾಗ ಅವರ ವೈರಾಗ್ಯ ಜೀವನದ ಪ್ರತ್ಯಕ್ಷ ದರ್ಶನವಾಗುತ್ತದೆ. ಕಣ್ಣೀರು ಸುರಿಯುತ್ತದೆ. ಆಚಾರ್ಯರ ಆ ಧರ್ಮರಾಯನನ್ನೂ, ಕಿಲ್ಲೆಯವರ ಆ ಅರ್ಜುನನನ್ನೂ ತಾಳಮದ್ದಳೆಯ ಪ್ರಪಂಚದಲ್ಲಿ ಇನ್ನೊಮ್ಮೆ ಕಾಣಲಿಕ್ಕಿದೆಯೇ? ರಸದ ಪ್ರವಾಹದಲ್ಲಿ ಕೊಚ್ಚಿ ಹೋಗಿ ನಮ್ಮನ್ನು ನಾವು ಮರೆಯುವ ಪ್ರಸಂಗವನ್ನು ಕಲಾವಿದರು ಇನ್ನೊಮ್ಮೆ ಸೃಜಿಸಬಲ್ಲರೇ? ಹಾಗಾದರೆ ಮಾತ್ರ ಸಹೃದಯರು ನಿಶ್ಚಯವಾಗಿಯೂ ಯಕ್ಷಗಾನ ತಾಳಮದ್ದಳೆ ಪುನಶ್ಚೇತನಗೊಂಡಿದೆ ಎಂದು ಸಮಾಧಾನದ ಉಸಿರು ಬಿಡುವಂತಾದೀತು.

## ಆಚಾರ್ಯರ ಪ್ರತ್ಯುತ್ಪನ್ನಮತಿ

ಅಚಾರ್ಯರ ಪ್ರತ್ಯುತ್ಪನ್ನಮತಿಯ ಬಗ್ಗೆ ಪ್ರೊ. ತೆಕ್ಕುಂಜ ಗೋಪಾಲಕೃಷ್ಣಭಟ್ಟರು ಕೆಲವು ಘಟನೆಗಳನ್ನು ದಾಖಲಿಸಿದ್ದಾರೆ(೧೯೭೨). ಅವರ ಮಾತುಗಳಲ್ಲೇ ಅದನ್ನು ಓದಿ:

"ಒಮ್ಮೆ ಕುಂಬಳೆಯಲ್ಲಿ ಒಂದು ತಾಳಮದ್ದಳೆ ನಡೆಯಿತು. ಅದಕ್ಕೆ ಹೆಸರುಗೊಂಡ ಅರ್ಥಧಾರಿಗಳಾರನ್ನೂ ಕರೆಯಿಸದೆ ಸುಬ್ರಾಯಾಚಾರ್ಯರನ್ನು ಮಾತ್ರ ಕರೆಯಿಸಿದ್ದರು. ಆ ತಾಳಮದ್ದಳೆಯನ್ನು ಏರ್ಪಡಿಸಿದವರ ಮುಖ್ಯೋದ್ದೇಶವೇ 'ಆ ಆಚಾರಿಯನ್ನು ಚೆನ್ನಾಗಿ ಬಯ್ಯಬೇಕಾದುದು'. ಪಾಪ, ಸುಬ್ರಾಯಾಚಾರ್ಯರಿಗೆ ಈ ದುರುದ್ದೇಶ ಗೊತ್ತಿರಲಿಲ್ಲ. ಅಲ್ಲಿಗೆ ಹೋಗಿ, ಮೊದಲೇ ನಿಶ್ಚಯವಾದಂತೆ ಕರ್ಣಪರ್ವದ ಧರ್ಮರಾಯನ ಪಾತ್ರವನ್ನು ವಹಿಸಿಕೊಂಡರು. ತಾಳಮದ್ದಳೆಯ ಕಾರಣ ಕರ್ತರು ತಾವೇ ಕರ್ಣನ ಪಾತ್ರವನ್ನು ವಹಿಸಿಕೊಂಡು ಪ್ರಸಂಗದಲ್ಲಿರುವಂತೆ, ಕರ್ಣ–ಧರ್ಮರಾಯನ ಮೂರು ಸಲದ ಯುದ್ಧವನ್ನೂ ಇರಿಸಿಕೊಂಡು, ಮೂರು ಬಾರಿಯೂ ಧರ್ಮರಾಯನನ್ನು ಬಾಯಿಗೆ ಬಂದಂತೆ ಬೈದರು. ಇಷ್ಟಾದರೂ ಸುಬ್ರಾಯಾಚಾರ್ಯರು, ಒಳಗುಟ್ಟು ಗೊತ್ತಿಲ್ಲದ ಕಾರಣ, ಕರ್ಣನ ಪಾತ್ರ ವಹಿಸಿದವರು ಪ್ರಸಂಗ ಪದ್ಯಗಳ ಅರ್ಥವನ್ನೇ ಸ್ವಲ್ಪ ಅತಿಶಯವಾಗಿ ಹೇಳುತ್ತಾರೆಂದು ನಂಬಿ ತಮ್ಮ ಅಂಕೆಯೊಳಗೇ ಇದ್ದರು. ಮೂರನೆಯ ಬಾರಿ ಯುದ್ಧದ ಸಂದರ್ಭದಲ್ಲಿಯೂ ಕರ್ಣನು ಧರ್ಮರಾಯನನ್ನು ಕುರಿತು 'ಹೇಡಿ, ದುರ್ಬಲ, ಅಯೋಗ್ಯ, ತುಚ್ಛ' ಎಂದೆಲ್ಲ ಮೊದಲು ಹೇಳಿದ ಮಾತನ್ನೇ ಹೇಳಿದಾಗ ಸುಬ್ರಾಯಾಚಾರ್ಯರು 'ಹೌದು, ಕರ್ಣ! ನಾನು ಹೇಡಿ, ದುರ್ಬಲ, ಅಯೋಗ್ಯ, ತುಚ್ಛ, ಆದರೆ ಮಹಾಯೋಗ್ಯನೂ ಮಹಾವೀರನೂ ಆದ ನಿನಗೆ ಮೂರು ಮೂರು ಬಾರಿಯೂ ಯುದ್ಧಕ್ಕೆ ಬೇಕಾದವನು ನಾನೇ ಅಲ್ಲವೇ?' ಎಂದರು. ಸಭೆಗೆ ಸಭೆಯೇ ಗೊಳ್ಳೆಂದು ನಕ್ಕಿತು. ಕರ್ಣನ ಪಾತ್ರ ವಹಿಸಿದವರ ಮೋರೆ ಕಪ್ಪಾಯಿತು, ತೇಜೋವಧೆಯೂ ಆಯಿತು. ಅನಂತರ ಅವರು ಕರ್ಣನ ಪಾತ್ರವನ್ನೇ ವಹಿಸಿಕೊಳ್ಳಲಿಲ್ಲವಂತೆ. (ಸ್ವರ್ಣಕಮಲ)

## ಆಚಾರ್ಯರ ಹಾಸ್ಯ ಪ್ರವೃತ್ತಿ

- ಒಮ್ಮೆ ಆಚಾರ್ಯರು, ಕಿಲ್ಲೆಯವರು ಮತ್ತು ಶಾಸ್ತ್ರಿಗಳು, ಪಂಡಿತ ಜವಾಹರಲಾಲ ನೆಹರೂ ಅವರ ಭಾಷಣ ಕೇಳಲು ಮೈದಾನಿಗೆ ಹೋಗಿದ್ದರು. ಅದು ಸ್ವಾತಂತ್ರ್ಯ ಪೂರ್ವ ಯುಗ. ನೆಹರೂ ಅವರು, ಜನರು ದೇಶಕ್ಕಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ ಹೋರಾಡಲು ಸಿದ್ಧರಾಗಿರಬೇಕೆಂದು ಆಗಾಗ ಹೇಳುತ್ತಿದ್ದರು. ಅವರ ಭಾಷಣದಲ್ಲಿ (Sacrifice) ಎಂಬ ಶಬ್ದ ಅನೇಕ ಸಲ ಬಂದಿತ್ತು. ಭಾಷಣ ಮುಕ್ತಾಯವಾಯಿತು. ಅವರೆಲ್ಲಾ ಮನೆಗೆ ಹೊರಡಲು ಸಿದ್ಧರಾದಾಗ ಆಚಾರ್ಯರು– "ದಾನೆ? ಪೋಪುನಿಯಾ? ಸಕ್ರೆ ಪ್ಯಾಸ ಇಜ್ಜಿಯಾ?" ಎಂದು ತಾನು ನಗದೆ ಹೆಡ್ಡರಂತೆ ನಟಿಸಿ, ಎಲ್ಲರನ್ನು ನಗಿಸಿದರು.
- 'ಕೊಟ್ಟಾರ'ದಲ್ಲಿ ಒಮ್ಮೆ ಆಚಾರ್ಯರಿಗೆ ಪ್ರವಚನಕ್ಕೆ ಆಹ್ವಾನ ದೊರಕ್ಕಿತ್ತು. ಆವಾಗ ಆಚಾರ್ಯರು "ಕೊಟ್ಟಾರದಲ್ಲಿ ಪ್ರವಚನಕ್ಕೆ ಅವಕಾಶ ಮಾಡಿ ಕೊಟ್ಟಾರಾ?"ಎಂದು ದ್ವಂದ್ವಾರ್ಥದಲ್ಲಿ ಪ್ರತಿಕ್ರಿಯಿಸಿದ್ದರು. (ಮಾಹಿತಿ: ಅನಂತಯ್ಯ ಪುರೋಹಿತರು, ಮಂಗಳೂರು)



- ಒಮ್ಮೆ 'ಕಾಡುಮಠ' ಎಂಬಲ್ಲಿ ಜರುಗಿದ ಕರ್ಣಪರ್ವ ಪ್ರಸಂಗದ ತಾಳಮದ್ದಳೆಯಲ್ಲಿ ಆಚಾರ್ಯರು ಧರ್ಮರಾಯನ ಪಾತ್ರವಹಿಸಿದ್ದರು. ಧರ್ಮರಾಯನು ವೈರಾಗ್ಯದಿಂದ ವನವಾಸಕ್ಕೆ ಹೊರಡುವ ಸಂದರ್ಭದಲ್ಲಿ ದ್ರೌಪದಿ ಬಂದು ತಡೆಯುತ್ತಾಳೆ. ಆಗ ಆಚಾರ್ಯರು ಫಕ್ಕನೆ – "ಸುಮ್ಮನಿರು, ತುಟಿಮೀರಿದ ಹಲ್ಲು" ಎಂದರು. ದ್ರೌಪದಿಯ ಅರ್ಥ ಹೇಳಿದವರು ಕುರಿಯ ವಿಠಲ ಶಾಸ್ತ್ರಿಗಳು. ವಿಠಲ ಶಾಸ್ತ್ರಿಗಳ ಎರಡು ಹಲ್ಲು ತುಟಿಮೀರಿದವುಗಳು. ಈ ಮಾತಿನಿಂದ ಸಭೆಯಲ್ಲಿ ನಗುವೆದ್ದಿತು. (ಸ್ವರ್ಣಕಮಲದಲ್ಲಿ ಅಳಕೆ ರಾಮಯ್ಯ ರೈಗಳು)

## ಆಚಾರ್ಯರ ಕುರಿತಾದ ಪಂಡಿತ–ಮಾನ್ಯರ ಮೆಚ್ಚುಗೆಯ ನುಡಿಗಳು

- 'ಕೃಷ್ಣಸಂಧಾನ'ವೆಂಬ ಹಳೆಯ ಪ್ರಸಂಗವನ್ನು ತಿದ್ದಿ ಸಟೀಕೆಯೊಂದಿಗೆ ಮುದ್ರಣಗೊಳಿಸಿ ಯಕ್ಷಗಾನ ಪಾತ್ರವರ್ಗದವರಿಗೆ ಆದರ್ಶಮಾರ್ಗವನ್ನು ಕಲ್ಪಿಸಿಕೊಟ್ಟವರು– **ಕವಿ ಭೂಷಣ ಕೆ.ಪಿ. ವೆಂಕಪ್ಪ ಶೆಟ್ಟರು.**
- "ಸತ್ಯ ನಾರಾಯಣ ಕಥೆ ಹೇಳುತ್ತಿದ್ದ ನನ್ನನ್ನು ಯಕ್ಷಗಾನ ಅರ್ಥಧಾರಿಯನ್ನಾಗಿ ಮಾಡಿದವರು ಸುಬ್ರಾಯ ಆಚಾರಿ" – **ಪೊಳಲಿ ಶಂಕರ ನಾರಾಯಣ ಶಾಸ್ತ್ರಿಗಳು.**
- "ದ.ಕ. ಜಿಲ್ಲೆಯ ತಾಳಮದ್ದಳೆ ಅರ್ಥಗಾರಿಕೆಯ 'ಮಹಾರಥಿಕ'ರಾಗಿ ಮೆರೆಯುತ್ತಿದ್ದವರು"– **ಮಲ್ಪೆ ಶಂಕರನಾರಾಯಣ ಸಾಮಗರು.**
- ಯಕ್ಷಗಾನ ತಾಳಮದ್ದಳೆಯ ಬ್ರಹ್ಮನ ನಾಲ್ಕು ಮುಖಗಳಲ್ಲಿ ಒಂದೆಂದು ವಿದ್ವಜ್ಜನ ಪ್ರಶಂಸೆಗೆ ಪಾತ್ರರಾದವರುಆಚಾರ್ಯರು. ಕವಿಭೂಷಣ ಪೊಳಲಿ ಮತ್ತು ಕಿಲ್ಲೆಯವರು ಉಳಿದ ಮೂರು ಮುಖಗಳೆಂದು ಬಣ್ಣಿಸಿದವರುಂಟು – **ಅ. ಬಾಲಕೃಷ್ಣ ಶೆಟ್ಟಿ ಪೊಳಲಿ.**
- ದೊಡ್ಡತಾಳಮದ್ದಳೆಯೆಂದರೆ ಈ ನಾಲ್ಕು ಮಂದಿ ಬೇಕೇಬೇಕೆಂದಾಯಿತು. ೧೯೩೦–೫೫ ಯಕ್ಷಗಾನ ತಾಳಮದ್ದಳೆಯ ಸ್ವರ್ಣಯುಗ ಎಂದು ಇತಿಹಾಸದಲ್ಲಿ ದಾಖಲಾಯಿತು **– ಕುಬಣೂರು ಬಾಲಕೃಷ್ಣ ರಾವ್, ಎಡ್ವೊಕೇಟ್.**
- "ಒಮ್ಮೆ ಅರ್ಕುಳ ಸುಬ್ರಾಯ ಆಚಾರ್ಯರು ಸುಗ್ರೀವನಾಗಿ ವೆಂಕಪ್ಪ ಶೆಟ್ಟರ ವಾಲಿಗಿದಿರಾಗಿ 'ಅಣಕವಲ್ಲ ಮೊದಲಿನಂತೆ' ಎಂಬ ಪದದ ಅರ್ಥದಲ್ಲಿ 'ಈ ಸಲ ನಿನ್ನನ್ನು ಒರೆದು ನೋಡುವುದಕ್ಕೆ ಬಂದಿದ್ದೇನೆ' ಎಂದು ಹೇಳಿ ಮುಗಿಸುವಷ್ಟರಲ್ಲಿ ಶೆಟ್ಟರು 'ಒರೆಗಲ್ಲನ್ನು ಮಾತ್ರ ತಂದಿದ್ದೀಯೊ, ಜೊತೆಗೆ ತೂಕ ಮಾಡಲಿಕ್ಕೆ ತ್ರಾಸು ಕಲ್ಲುಗಳನ್ನು ತಂದಿದ್ದೀಯೋ?' ಎಂದು ತಿರುಗು ಬಾಣವನ್ನು ಬಿಟ್ಟರು. ಸಭೆಗೆ ಸಭೆಯೇ 'ಘೋ' ಎಂದು ನಗೆಯ ಅಬ್ಬರದಲ್ಲಿ ತುಂಬಿತು. ಸುಬ್ರಾಯ ಆಚಾರ್ಯರು ಸ್ವರ್ಣಕಾರ ವರ್ಗದವರು ಮಾತ್ರವಲ್ಲ ಒಳ್ಳೆಯ ಚಿನ್ನಾಭರಣ ತಯಾರಿಕೆಯಲ್ಲಿಯೂ ಹೆಸರು ಪಡೆದವರಾಗಿದ್ದರು. ಈ ವಿಚಾರವನ್ನು ಬಲ್ಲವರಿಗೆ ಶೆಟ್ಟರ ಉತ್ತರ ಉತ್ತೇಜಕವಾದದ್ದು ಆಶ್ಚರ್ಯವಲ್ಲ. ಆದರೆ ಇದನ್ನು ಸಂಕುಚಿತ ಅರ್ಥದಲ್ಲಿ ಗ್ರಹಿಸದಿದ್ದುದಕ್ಕೆ ಅವರ ಕಲಾವಂತಿಕೆಯೂ ಸಂಸ್ಕಾರವೂ ಕಾರಣವಾಗಿದೆ ಎಂದು ನನ್ನ ನಂಬಿಕೆ. ಹಿರಿಯ ಕಲಾವಿದರಲ್ಲಿ ಗುರುತಿಸಬಹುದಾದ

ಇಂಥ ನಡತೆಯಿರಬೇಕು" – **ಶೇಣಿ ಗೋಪಾಲ ಕೃಷ್ಣ ಭಟ್ಟರು**

- "ಯಕ್ಷಗಾನದ ಧ್ರುವತಾರೆ" – **ಅಳಕೆ ರಾಮಯ್ಯ ರೈಗಳು**
- "ತಾಳಮದ್ದಳೆ ರಂಗದ ನವೋದಯ ಕಾಲದ ಅಗ್ರಣಿಗಳು"–**ಡಾ| ಎಂ.ಪ್ರಭಾಕರ ಜೋಶಿ**

## ಉಪಸಂಹಾರ

ಶತಾಯುಷಿ ಸಾಹಿತಿ ಕಯ್ಯಾರ ಕಿಂಞಣ್ಣ ರೈಗಳು ಆಚಾರ್ಯರ ಬಗ್ಗೆ (೧೯೮೫) ಬರೆದಿರುವ ಮಾತುಗಳು ಇವು: "ಶ್ರೀ ಅರ್ಕುಳ ಸುಬ್ರಾಯ ಆಚಾರ್ಯರು ಯಕ್ಷಗಾನ ಪುರಾಣ ಪ್ರವಚನಾದಿ ಕಾರ್ಯಗಳಲ್ಲಿ ದುಡಿದ ಆ ಕಾಲ ನಮ್ಮ ನಾಡು–ನುಡಿಗಳ ನವೋದಯದ ಕಾಲ. ಇಡೀ ಭಾರತ ದೇಶ ದಾಸ್ಯದಿಂದ ವಿಮೋಚನೆಗಾಗಿ ಹೋರಾಡತೊಡಗಿದ ಕಾಲ. ಕನ್ನಡನಾಡು ಒಂದಾಗಬೇಕೆಂಬ ಕನಸು ಕಂಡ ಕಾಲ. ಕನ್ನಡ ಸಾಹಿತ್ಯದಲ್ಲಿಯೂ ನವೋದಯ ಕಾಲ. ಎಲ್ಲ ಕ್ಷೇತ್ರಗಳಲ್ಲಿಯೂ ಧೀಮಂತರಾದ ಹಲವಾರು ಮಹನೀಯರು ಉತ್ತಮ ಕಾರ್ಯಗಳನ್ನು ಕೈಗೊಂಡು ದೇಶಕ್ಕೆ, ಭಾಷೆಗೆ, ದೇಶಭಾಷೆಗಳ ಸಂಸ್ಕೃತಿಗೆ ತಮ್ಮ ಉತ್ತಮವಾದ ಕೊಡುಗೆಯನ್ನು ನೀಡಿ ಭವಿಷ್ಯದಲ್ಲಿ ಭವ್ಯವಾದುದನ್ನು ನಿರೀಕ್ಷಿಸಿ ಕಾರ್ಯಪ್ರವೃತ್ತರಾದ ಸಮಯದಲ್ಲಿ, ಯಕ್ಷಗಾನ ಕ್ಷೇತ್ರದಲ್ಲೂ ಒಳ್ಳೆಯ ಮೇಧಾವೀ ಮುಂದಾಳುಗಳು ಸರಿಯಾದ ಮಾರ್ಗದರ್ಶನ ನೀಡಿದರು. ಯಕ್ಷಗಾನ ಕಲೆಯನ್ನು ಪಂಡಿತ ಪಾಮರ ರಂಜಕವಾಗುವಂತೆ ಮಾಡಿದ್ದರಿಂದ ಅವರಿಗೆ ಹೆಸರು ಬಂದುದಲ್ಲದೆ ನಾಡಿಗೂ, ನುಡಿಗೂ ಉಚಿತವಾದ ಕಾಣ್ಕೆ ಸಲ್ಲಿಸಿದರು. ಆ ಕಾಲದಲ್ಲಿ ಕಾರ್ನಾಡರು, ಕುದ್ಮುಲ್ ರಂಗರಾಯರು, ಮೂಡಬಿದ್ರೆ ಉಮೇಶರಾಯರು, ಕೋಟ ರಾಮಕೃಷ್ಣ ಕಾರಂತರು, ಅತ್ತಾವರ ಬಾಲಕೃಷ್ಣ ಶೆಟ್ಟರು, ಶ್ರೀನಿವಾಸ ಮಲ್ಯರು ಇಂತಹ ಹಲವಾರು ಶ್ರೇಷ್ಠ ದೇಶಭಕ್ತರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮ ತನುಮನಧನಗಳನ್ನರ್ಪಿಸಿ ದುಡಿದಂತೆ, ಪಂಜೆಯವರು, ಬೆನೆಗಲರು, ಗೋವಿಂದ ಪೈಗಳು, ಎಂ. ಎನ್. ಕಾಮತರು, ಉಗ್ರಾಣರು, ಮುಳಿಯರು, ಕಡೆಂಗೋಡ್ಲು ಅವರೇ ಮೊದಲಾದವರು ಸಾಹಿತ್ಯ ಕ್ಷೇತ್ರದಲ್ಲಿ ಅಪೂರ್ವ ಸೇವೆ ಸಲ್ಲಿಸಿದಂತೆ, ವೆಂಕಪ್ಪ ಶೆಟ್ಟರು, ಪೊಳಲಿ ಶಾಸ್ತ್ರಿಗಳು, ನಾರಾಯಣ ಕಿಲ್ಲೆಯವರು, ಅರ್ಕುಳ ಸುಬ್ರಾಯ ಆಚಾರ್ಯರು ಇಂತಹ ಪ್ರತಿಭಾವಂತರು ಯಕ್ಷಗಾನ – ತಾಳಮದ್ದಳೆಗಳ ಕಲಾಮಾಧ್ಯಮದ ಮೂಲಕ ಕನ್ನಡ ನಾಡಿಗೆ, ಆ ಮೂಲಕ ಸಮಗ್ರ ಭಾರತ ವರ್ಷಕ್ಕೆ ಮಹತ್ತಾದ ಕೊಡುಗೆ ನೀಡಿ ಚಿರಸ್ಮರಣೀಯರಾದರು." (ಸ್ವರ್ಣಕಮಲ)

### ಗ್ರಂಥ ಋಣ


೧. ಅರ್ಥಸಹಿತ ಕೃಷ್ಣ ಸಂಧಾನ : ಅರ್ಕುಳ ಸುಬ್ರಾಯ ಆಚಾರ್ಯ
೨. ಯಕ್ಷಗಾನ ಮಕರಂದ (೧೯೮೦) : ಪೊಳಲಿ ಶಂ.ನಾ. ಶಾಸ್ತ್ರಿಗಳ ಸಂಸ್ಮರಣ ಗ್ರಂಥ. ಸಂಪಾದಕರು: ಮುಳಿಯ ಮಹಾಬಲ ಭಟ್ಟ, ಎಡ್ವೋಕೇಟ್, ಮಂಗಳೂರು
೩. ಸ್ವರ್ಣ ಕಮಲ (೧೯೮೮) ಅರ್ಕುಳ ಸುಬ್ರಾಯ ಆಚಾರ್ಯ ಸಂಸ್ಮರಣ ಗ್ರಂಥ. ಸಂಪಾದಕರು: ಮುಳಿಯ ಮಹಾಬಲ ಭಟ್ಟ, ಎಡ್ವೋಕೇಟ್, ಮಂಗಳೂರು
೪. ಒಡ್ಡೋಲಗ : ಭಾಸ್ಕರ ರೈ ಕುಕ್ಕುವಳ್ಳಿ (೨೦೦೨)
೫. ಯಕ್ಷಗಾನ ಮತ್ತು ನಾನು : ಶೇಣಿ ಗೋಪಾಲಕೃಷ್ಣ ಭಟ್ಟರು.




# ಅನುಬಂಧ

## ಬ್ರಹ್ಮೋಪದೇಶ

### ವಾರ್ಧಕ

**ಅರಸ ಕೇಳ್ ಸಂಜಯಂ ಗಜನಗರಮಂ ಪೊಕ್ಕು। ಧರಣೀಶ ಧೃತರಾಷ್ಟ್ರಗೀಪರಿಯ ಸೂಚಿಸಲ್। ಮರುಗುತಾ ರಾತ್ರಿಯಲಿ ನಿದ್ರೆ ಬರದೆ ವಿದುರನಂ ಕರೆಸುತವನಿಂದಲೆ॥**

ಧೃತರಾಷ್ಟ್ರ_ಆಹಾ! ಉಪಪ್ಲಾವ್ಯನಗರದಲ್ಲಿರುವ ಪಾಂಡವರ ಬಳಿಗೆ ಹೋಗಿ ಬಂದ ಸಂಜಯನು ಏನೋ ಒಂದೆರಡು ಮಾತುಗಳಿಂದ ನನ್ನನ್ನು ದೂಷಿಸಿ, ಆ ಪಾಂಡವರಾಡಿದ ಮಾತುಗಳನ್ನು ನಾಳೆ ಸಭೆಯಲ್ಲೇ ಹೇಳುತ್ತೇನೆಂದು ಸಂಧ್ಯಾಕಾಲವಾಯಿತೆಂದು ಹೊರಟೇ ಹೋಗಿಬಿಟ್ಟನು. ಹೀಗೆಂಬಾಗ ಪಾಂಡವರಾಡಿದ ಮಾತುಗಳೇನಿರಬಹುದೋ ಎಂಬ ವಿಚಾರದಿಂದ ಇಂದಿನ ರಾತ್ರಿಯಲ್ಲಿ ನಿದ್ರೆಯೇ ಬರುವುದಿಲ್ಲವಲ್ಲ! ಆದಕ್ಕಾಗಿ ಸುಜ್ಞಾನಿಯಾದ ವಿದುರನನ್ನು ದ್ವಾರಪಾಲಕರ ಮುಖಾಂತರ ಇಲ್ಲಿಗೆ ಕರೆಸಿಕೊಳ್ಳುತ್ತೇನೆ.

ವಿದುರ_ಪ್ರಭುವೆ! ನಮಸ್ಕಾರ.

ಧೃತರಾಷ್ಟ್ರ_ನಮಸ್ಕಾರ. ವಿದುರ! ಬಂದುಬಿಟ್ಟೆಯಾ? ಲೇಸಾಯಿತು.

ವಿದುರ_ರಾಜ! ಈ ರಾತ್ರಿಯಲ್ಲಿ ನನ್ನನ್ನು ಏತಕ್ಕೆ ಕರೆಸಿದೆ? ಹೇಳು.

ಧೃತರಾಷ್ಟ್ರ_ಪ್ರಿಯನೆ! ಕೇಳು.

**ವರ ನೀತಿ ತತ್ತ್ವ ಧರ್ಮಂಗಳ ರಹಸ್ಯವ। ನ್ನರುಹಬೇಕೀಗ ತನಗಾತ್ಮ ವಿದ್ಯೆಯ ನೆಲೆಯ। ಪರಮ ಮಂತ್ರಾಕ್ಷರದ ಬೀಜವನೆನಲ್ಕೆ ಕೈಮುಗಿದೆಂದನಂಧನೃಪನ ॥೧॥**

ಧೃತರಾಷ್ಟ್ರ_ವಿದುರ! ಉಪಪ್ಲಾವ್ಯದಲ್ಲಿ ಪಾಂಡವರಾಡಿದ ಮಾತುಗಳನ್ನು ನಾಳೆ ಸಭೆಯಲ್ಲೇ ಹೇಳುತ್ತೇನೆಂದು ಸೂಚಿಸಿ, ಸಂಜಯನು ಇಲ್ಲಿಂದ ಹೊರಟುಹೋದ ಮೇಲೆ, ಧರ್ಮಜಾದಿಗಳು ಸಂಜಯನ ಕೂಡೆ ಏನೆಂದಿರುವರೋ, ಕುಮಾರ್ಗಿಗಳಾದ ನನ್ನ ಮಕ್ಕಳ ಗತಿಯು ಮುಂದಕ್ಕೇನಾಗುವುದೋ, ಎಂಬಿವೇ ಮೊದಲಾದ ಯೋಚನೆಗಳಿಂದ ಮನಸ್ಸಿನಲ್ಲಿ ಪಶ್ಚಾತ್ತಾಪಗೊಂಡು, ನಿದ್ರೆಗೆ ಅವಕಾಶವಿಲ್ಲದವನಾಗಿದ್ದೇನೆ. ಆದುದರಿಂದ ನನ್ನ ಮನಸ್ಸಿನ ವ್ಯಸನವು ಪರಿಹಾರವಾಗುವಂತೆ ನೀತಿ ಧರ್ಮಗಳ ರಹಸ್ಯವನ್ನೂ, ಆತ್ಮಜ್ಞಾನದ ನೆಲೆಯನ್ನೂ, ಅದರ ಮೂಲಮಂತ್ರಾಕ್ಷರದ ಬೀಜವನ್ನೂ, ಧರ್ಮಾರ್ಥಕುಶಲನಾದ ನೀನು ನನಗೆ ಉಪದೇಶಿಸಬೇಕಯ್ಯ.

ವಿದುರ_ರಾಜ! ಅರಿಕೆಮಾಡಿಕೊಳ್ಳುತ್ತೇನೆ.

### ಭಾಮಿನೀ

**ಅರಸ ಕೇಳ್ ಪರತತ್ತ್ವವಿದ್ಯೆಯ। ನರುಹಿಸುವಡೆ ಸನತ್ಕುಮಾರನೆ। ಹೊರತು ಮಿಕ್ಕಾದವರಿಗಸದಳವಾ ಮುನೀಶ್ವರನ॥**

ವಿದುರ_ಪ್ರಭೋ! ರಾಜನೀತಿಯೇ ಮೊದಲಾದ ಧರ್ಮರಹಸ್ಯಗಳನ್ನು ನಾನೇ ಬೋಧಿಸುವೆನಾದರೂ, ಆತ್ಮಜ್ಞಾನದ ನೆಲೆಯ ಮೂಲಮಂತ್ರವಾದ ತತ್ತ್ವೋಪದೇಶವನ್ನು ಮಾಡಬೇಕಾದರೆ, ಬ್ರಹ್ಮರ್ಷಿಯಾದ ಸನತ್ಕುಮಾರನೇ ಅರ್ಹನಲ್ಲದೆ, ಇತರರಿಂದ ಸಾಧ್ಯವಿಲ್ಲ. ಆದುದರಿಂದ ಕೇಳು.

**ಸ್ಮರಿಸೆನಲು ಮಾನಸದಿ ನೆನೆದರೆ। ಕರುಣದಿಂದಯ್ತರಲಿಕಾತನ। ಚರಣಪೂಜೆಯ ಮಾಡಿ ಬಲವಂದೆರಗುತಿಂತೆಂದ ॥೧॥**

ವಿದುರ_ಆ ಮಹಾತ್ಮನನ್ನು ನೀನು ದೃಢಮನಸ್ಸಿನಿಂದ ಸ್ಮರಿಸಿದೆಯಾದರೆ ಕೂಡಲೇ ಪ್ರತ್ಯಕ್ಷನಾಗಿ, ನಿನ್ನ ಮನಸ್ಸಿನ ಚಿಂತಾಂಧಕಾರವನ್ನು ಹೋಗಲಾಡಿಸುವನು.ಭಕ್ತಿಯಿಂದ ಸ್ಮರಿಸಿಬಿಡು.

ಧೃತರಾಷ್ಟ್ರ_ಲೇಸು. ಆಹಾ! ಮಹಾನುಭಾವನಾದ ವಿದುರನಾಜ್ಞೆಯಂತೆ ಆ ಮಹಾತ್ಮರನ್ನು ಪ್ರಾರ್ಥಿಸಿದೊಡನೆ, ತೇಜೋನಿಧಿಯಾದ ಬ್ರಹ್ಮರ್ಷಿಯು ಪ್ರತ್ಯಕ್ಷವಾಗಿಬಿಟ್ಟರು.ಈ ಮಹಾತ್ಮರ ಪಾದಪೂಜೆಯನ್ನು ಮಾಡಿ, ಪ್ರದಕ್ಷಿಣೆ ಬಂದು, ಸಾಷ್ಟಾಂಗವೆರಗಿ ಅರಿಕೆಮಾಡಿಕೊಳ್ಳುತ್ತೇನೆ.

### ರಾಗ ಸಾಂಗತ್ಯ ರೂಪಕತಾಳ

**ಮುನಿಪ ಕೇಳ್ ಕರುಣದಿ ಬ್ರಹ್ಮೋಪದೇಶವ। ನೆನಗೆ ನೀ ಶ್ರುತಗೊಳಿಸಯ್ಯ॥ ಎನಲಾಗ ಪರತತ್ತ್ವ ವಿದ್ಯಾವಿಷಯಗಳ। ನನುಕರಿಸಿದು ಬಳಿಕೆಂದ॥೧॥**

ಧೃತರಾಷ್ಟ್ರ–ಪೂಜ್ಯರಾದ ಮಹರ್ಷಿಯೇ! ದುರ್ಮಾರ್ಗಿಗಳಾದ ನನ್ನ ಮಕ್ಕಳ ದೆಸೆಯಿಂದ ಚಿಂತಾಗ್ನಿಯಲ್ಲಿ ಕುದಿಯುತ್ತಿರುವ ನನ್ನ ಹೃದಯದ ತಾಪವು ಶಮನವಾಗುವಂತೆ ನನಗೆ ಜ್ಞಾನೋಪದೇಶವನ್ನು ಮಾಡಬೇಕು, ಸ್ವಾಮಿ.

ಸನತ್ಕುಮಾರ_ಪ್ರಭುವೇ! ಲಕ್ಷ್ಯವಿಟ್ಟು ಕೇಳುವವನಾಗು.

**ತೋರುವ ಸಕಲ ಪ್ರಪಂಚವೆಲ್ಲವು ಮಾಯೆ। ತೋರುವುದಕೆ ನಾಶವುಂಟು॥ ತೋರದಿರುವ ವಸ್ತುವಿಗೆ ನಾಶವಿಲ್ಲ ಕೇಳ್। ತೋರದಿರ್ಪುದೆ ಪರಬ್ರಹ್ಮ॥೨॥**

ಸನತ್ಕುಮಾರ_ರಾಜ! ಈ ನಮ್ಮ ಮಾಂಸಾಕ್ಷಿಗಳಿಗೆ ಪ್ರಕೃತ ಗೋಚರಿಸುತ್ತಿರುವ ಪ್ರಪಂಚದ (ಜಗತ್ತಿನ) ಎಲ್ಲ ಪದಾರ್ಥಗಳೂ ನಿಜವಲ್ಲದ ಮಾಯಾಸಂಬಂಧದವುಗಳೆಂದು ತಿಳಿದುಕೊ. ನಾವು ಈ ಕಣ್ಣುಗಳಿಂದ ಯಾವುವನ್ನು ಕಾಣುವೆವೋ ಅವುಗಳಿಗೆಲ್ಲ ನಾಶವಿದೆ; ಕಾಣಲಿಕ್ಕೆ ಸಿಗದಿರುವ ಯಾವ ವಸ್ತುವಿದೆಯೋ ಅದಕ್ಕೆ ನಾಶವಿಲ್ಲ. ಹೀಗೆಂಬಾಗ ಆದ್ಯಂತಶೂನ್ಯನಾಗಿ, ಕಾಣಲಿಕ್ಕಿರುವ ಈ ಕಣ್ಣುಗಳಿಗೆ ಗೋಚರವಾಗದೆ ಶಾಶ್ವತವಾಗಿರುವ ಪರವಸ್ತುವು ಯಾವುದೋ ಅದನ್ನೇ ಪರಬ್ರಹ್ಮವೆಂದು ತಿಳಿ.

ಧೃತರಾಷ್ಟ್ರ– ಸ್ವಾಮಿ! ಆ ಪರಬ್ರಹ್ಮವು ಈ ಜಗತ್ತಿನಲ್ಲಿ ಯಾವ್ಯಾವುವುಗಳನ್ನೆಲ್ಲ ಅತಿಕ್ರಮಿಸಿ ಇರುವುದೆಂಬುದು ಅಪ್ಪಣೆಯಾಗಬೇಕು.

ಸನತ್ಕುಮಾರ_ಪ್ರಭುವೆ, ಕೇಳು.

**ಮೂರು ತನುವು ಮೂರು ಗುಣದ ಕಾಲಂಗಳು। ಮೂರವಸ್ಥೆಯು ಮೂರೀಷಣವು॥ ಮೂರು ಶಕ್ತಿಯು ತೊಂಭತ್ತಾರು ತತ್ತ್ವಂಗಳ। ಮೀರಿರ್ಪುದೇ ಪರಬ್ರಹ್ಮ॥೩॥**

ಸನತ್ಕುಮಾರ_ರಾಜ! ಆದಿಭೂತಗಳಾದ ಪೃಥ್ವಿ, ಆಪ, ತೇಜ, ವಾಯು, ಆಕಾಶಗಳೆಂಬ ಪಂಚಭೂತಗಳ ಸಂಕಲನಗಳಿಂದ ವಾಕ್ಕು, ಪಾಣಿ, ಪಾದಾದಿ ಕರ್ಮೇಂದ್ರಿಯಪಂಚಕಗಳೂ, ಶಬ್ದ, ಸ್ಪರ್ಶ, ರೂಪಾದಿ ವಿಷಯಪಂಚಕಗಳೂ, ತ್ವಕ್ಕು, ಚಕ್ಷು, ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಗಳೂ, ಪ್ರಾಣ, ಅಪಾನ, ಉದಾನಾದಿ ಪಂಚಪ್ರಾಣಗಳೂ, ಮನೋ, ಬುದ್ಧಿ, ಚಿತ್ತಾದಿ ಅಂತಃಕರಣಪಂಚಕಗಳ ಸಮೇತ ಪಂಚವಿಂಶತಿ ತತ್ತ್ವಗಳೇ ಶಾಖೋಪಶಾಖೆಗಳಂತೆ ತೊಂಭತ್ತಾರಾಗಿ ತೋರುವ ತತ್ತ್ವಗಳನ್ನು ಮಿಕ್ಕಿರುವುವಲ್ಲದೆ, ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ತನುತ್ರಯಗಳಿಂದಲೂ ಸತ್ತ್ವ, ರಜ, ತಮಗಳೆಂಬ ತ್ರಿಗುಣಗಳಿಂದಲೂ, ಭೂತ ವರ್ತಮಾನ, ಭವಿಷ್ಯತ್ತು ಎಂಬ ಕಾಲತ್ರಯಗಳಿಂದಲೂ, ಜಾಗರ, ಸ್ವಪ್ನ, ಸುಷುಪ್ತಿ ಎಂಬ ಮೂರವಸ್ಥೆಗಳಿಂದಲೂ, ಅರ್ಥ, ಪುತ್ರ, ದಾರವೆಂಬ ತ್ರೈಷಣಗಳಿಂದಲೂ, ಕ್ರಿಯಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿಗಳೆಂಬ (ಉತ್ಸಾಹಶಕ್ತಿ, ಪ್ರಭುಶಕ್ತಿ, ದಂಡಶಕ್ತಿ) ಶಕ್ತಿತ್ರಯಗಳಿಂದಲೂ



ತಿಳಿಯುಲಶಕ್ಯವಾಗಿ, ಎಲ್ಲದಕ್ಕಿಂತಲೂ ಮಿಗಿಲಾಗಿರುವ ಆ ಪರಮವಸ್ತುವನ್ನೇ ಪರಬ್ರಹ್ಮವೆಂದಾಗಿ ನಿರ್ಧರಿಸಿಕೊ.

ಧೃತರಾಷ್ಟ್ರ_ಪೂಜ್ಯರೆ! ಅಂತಹ ಪರಬ್ರಹ್ಮಸಾಕ್ಷಾತ್ಕಾರವಾಗಿ, ಮುಕ್ತಿಯನ್ನು ಹೇಗೆ ಪಡೆಯಬಹುದು?

ಸನತ್ಕುಮಾರ_ಪ್ರಭುವೆ! ಕೇಳಯ್ಯ.

**ಮರೆವುದಾ ಸಕಲವ ಮನದಲ್ಲಿ ಮನವನ್ನು। ಮರೆವುದಾ ಮತಿಯಿಂದ ಮತಿಯ॥ ಮರೆವುದಾತ್ಮಾನಂದದಲಿಯಾತ್ಮಾನಂದವ। ಮರೆವುದು ಬರಿಯರಿವಾಗಿ॥೪॥**

ರಾಜ! **'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ'** ಎಂದಿರುವುದರಿಂದ ಕಣ್ಣಿಗೆ ಕಾಣುವ ಈ ಪ್ರಪಂಚದ (ಪ್ರಪಂಚದ ತದ್ಭವ–ಪರಪಂಚ=ವಂಚನೆಯ) ಸಮಸ್ತವನ್ನೂ ಮನಸ್ಸಿನಿಂದ ತ್ಯಜಿಸಿಬಿಟ್ಟು, ಆ ಮನಸ್ಸನ್ನು ಬುದ್ಧಿಯ ವಶಕ್ಕಿತ್ತು ಆತ್ಮಸಂಯಮನವೆಂಬ ಪ್ರಾಣಾಯಾಮದಲ್ಲಿ ನೆಲೆಗೊಳಿಸಿ, ಅದರಿಂದ ಆತ್ಮಾನಂದವುಂಟಾಗಿ, ಕಡೆಗೆ ಅವಿಚ್ಛಿನ್ನವಾದ ಶುದ್ಧಜ್ಞಾನ ದೀಪ್ತಿಯೇ ಭಾಸವಾಗುತ್ತದೆ. ಆಮೇಲೆ ಕೇಳು.

**ಮನವಳಿದೇಕತ್ವವಾಗಿರಲದು ಮುಕ್ತಿ। ಯೆನುತ ಬೋಧಿಸಿಯಂಧನೃಪನ॥ ಮನದ ಸಂದೇಹವೆಲ್ಲವ ಬೀಳುಗೊಳಿಸುತ್ತ। ಪುನರಪಿ ಪೇಳ್ದನಾ ನೃಪಗೆ ॥೫॥**

ಸನತ್ಕುಮಾರ_ಆ ಉತ್ತಮೋತ್ತಮವಾದ ಸುಜ್ಞಾನಪ್ರಕಾಶದಲ್ಲಿ ನಿಶ್ಚಲಗೊಂಡ ಮನಸ್ಸು ಇನ್ನಿತರ ಯಾವ ಪ್ರಾಪಂಚಿಕವಿಷಯಗಳಿಗೂ ಚಲಿಸದೆ, ತನ್ನಲ್ಲಿ ತಾನೇ ಲಯಿಸಿ ಅನನ್ಯಭಾವದಿಂದ ತಾನೇ ತಾನಾಗಿ ತತ್ಸ್ವರೂಪದಿಂದ ಏಕತ್ವವಾಗಿರುವುದೇ ಮೋಕ್ಷವೆನ್ನಲ್ಪಡುತ್ತದೆ. ಇಂತಹ ಮೋಕ್ಷರೂಪವಾದ ಬ್ರಹ್ಮಸಾಕ್ಷಾತ್ಕಾರವನ್ನು ನೀನು ಮಾತ್ರ ಬಹು ಸುಲಭವಾಗಿ ಪಡೆಯಬಹುದು. ಅದೆಂತೆಂದರೆ, ಪ್ರಪಂಚದ ಪದಾರ್ಥಗಳನ್ನು ಕಾಣಿಸಿಕೊಟ್ಟು ಮನಸ್ಸನ್ನೆಳೆದು ಬಂಧನಕ್ಕೀಡಾಗಿಸುವ ಕಣ್ಣುಗಳು ನಿನಗೆ ಹುಟ್ಟುವಾಗಲೇ ಇಲ್ಲದಿದ್ದುದರಿಂದ, ಇನ್ನು ಮನಸ್ಸೊಂದನ್ನು ಮಾತ್ರ ದೃಢಗೊಳಿಸಿದರಾಯಿತು.ಆದುದರಿಂದ, ಹೇಗೆ, ಪರಬ್ರಹ್ಮವಿಚಾರದಲ್ಲಿ ಇನ್ನು ನಿನಗೆ ಸಂದೇಹವಿಲ್ಲವಲ್ಲ?

ಧೃತರಾಷ್ಟ್ರ–ಜೀಯ! ಆ ವಿಚಾರದಲ್ಲಿ ನನಗೆ ತಿಲಾಂಶವಾದರೂ ಸಂದೇಹವಿಲ್ಲ. ಆದರೆ ನನ್ನ ಮನಸ್ಸೇ ನನ್ನಾಧೀನಕ್ಕೆ ಸಿಗದೆ ಬಹು ಕಳವಳಪಡುತ್ತಿದ್ದೇನಲ್ಲ, ಸ್ವಾಮಿ!

ಸನತ್ಕುಮಾರ_ಅದು ಏತರಿಂದ ಹಾಗಾಗುತ್ತಿದೆಯೆಂದು ಭಾವಿಸಿದೆಯಾ? ಕೇಳು.

**ಜನಪ ಕೇಳ್ ನಿನ್ನ ನಂದನರು ಪಾಂಡವರೊಳು। ರಣಕೆ ಸನ್ನಹಗೆಯ್ವರಂತೆ॥ ಘನತೆಯಿಲ್ಲನಿಬರ ತನುವಿಗೆ ಹೊಣೆಯಾಗಿ। ದನುಜಾರಿ ಕಾಯ್ದುಕೊಂಡಿಹನು ॥೬॥**

ಸನತ್ಕುಮಾರ_ರಾಜ! ನಿನ್ನ ಮಕ್ಕಳಾದ ಕೌರವಾದಿಗಳು ಧರ್ಮಸಂಪನ್ನರಾದ ಪಾಂಡವರೊಡನೆ ರಣಾಪೇಕ್ಷೆಯಲ್ಲಿದ್ದಾರಂತೆ.ಆದರೆ, ದುರ್ಜನಾಂತಕನಾದ ಲಕ್ಷ್ಮೀಶನ ದಯವೇ ಆ ಸತ್ಯಸಂಧರಾದ ಪಾಂಡವರಿಗೆ ವಜ್ರಕವಚದಂತೆ ರಕ್ಷೆಯಾಗಿರುವಲ್ಲಿ, ನಿನ್ನ ಮಕ್ಕಳಿಗೆ ಜಯಲೇಶವಾದರೂ ಸೋಕೀತೆ? ಏನು ಭ್ರಮೆ!

ಧೃತರಾಷ್ಟ್ರ–ಪೂಜ್ಯರೇ, ನಾನು ಆ ದುಷ್ಟರಿಗೆ ಎಷ್ಟು ಬೋಧಿಸಿದರೂ, ರಾಜ್ಯಸರ್ವಸ್ವವನ್ನೂ ತಮಗೆ ಸೋತು, ಶುದ್ಧ ಪರದೇಶಿಗಳಂತಿರುವವರ ಭೀತಿಯು ತಮಗೆ ಇನ್ನೇನೆಂದು ಲಕ್ಷ್ಯವಿಲ್ಲದೆ ಆ ಮೂರ್ಖರಿದ್ದಾರಲ್ಲ, ಸ್ವಾಮಿ,

ಸನತ್ಕುಮಾರ_ರಾಜ! ಆ ವಿಚಾರವೇ? ಕೇಳು.

**ದೇಶಕೋಶವನೆಲ್ಲ ಸೆಳಕೊಂಡು ಕಾಂತಾರ। ವಾಸಕಟ್ಟಿದರಿನ್ನವರ್ಗೆ॥ ವಾಸುದೇವನ ಕೃಪೆಯಿಲ್ಲದಿರ್ದಡೆ ಮತ್ತೆ। ಲೇಸಾಗಲುಂಟೆ ನೀ ನೋಡ್ಪೈ ॥೭॥**

ಸನತ್ಕುಮಾರ_ನೋಡು, ನಿನ್ನ ಮಕ್ಕಳು ಅವರ ದೇಶಕೋಶಾದಿ ಸರ್ವಸ್ವವನ್ನೂ

ಕಪಟದ್ಯೂತ ಮೂಲಕ ಸ್ವಾಧೀನಮಾಡಿಕೊಂಡು, ವನವಾಸ, ಅಜ್ಞಾತವಾಸವೆಂಬ ಕಠಿನಾಜ್ಞೆಯನ್ನಿತ್ತು ಕಷ್ಟಕ್ಕೆ ಗುರಿಪಡಿಸಿದರೂ, ಕಾಡೆಲ್ಲ ನಾಡಿಗಿಂತಲೂ ಸುಖವಾಗಿ, ಕಷ್ಟವೇ ತಮ್ಮಿಷ್ಟವಾಗಿ ಪರಿಣಮಿಸಿ, ಸುಕ್ಷೇಮಿಗಳಾಗಿ ಆ ಪಾಂಡವರು ಬರಬೇಕಾದರೆ, ಆ ಪರಮಾತ್ಮನ ದಯೆಯೊಂದಿಲ್ಲದಿದ್ದರೆ ಸಾಧ್ಯವಾಗುತ್ತಿತ್ತೆ? ನೀನೇ ವಿಚಾರಮಾಡಿ ನೋಡಯ್ಯಾ.

ಧೃತರಾಷ್ಟ್ರ–ಸ್ವಾಮಿ, ಮಕ್ಕಳಿಂದ ಸುಖವನ್ನನುಭವಿಸುವುದನ್ನು ಬಿಟ್ಟು, ಇಷ್ಟು ಮಕ್ಕಳಿದ್ದರೂ ಅಂತ್ಯಕಾಲದಲ್ಲಿ ದುಃಖವನ್ನನುಭವಿಸಲಿಕ್ಕಾಯಿತಲ್ಲ, ಜೀಯ!

ಸನತ್ಕುಮಾರ_ರಾಜ! ಎಷ್ಟು ಮಕ್ಕಳಿದ್ದರೆ ಏನು ಪ್ರಯೋಜನ? ಕೇಳು.

**ಕ್ಷೋಣಿಭಾರಕರ ನೀನೇಸು ಮಕ್ಕಳ ಪೆತ್ತ| ಡೇನಂಗವಾಂಯ್ತುಂಯ್ಯ ಜಗದಿ||**
**ವಾನರಧ್ವಜನೊಬ್ಬನಿರಲಾತನುರುಬೆಗ| ನ್ನಾನುವರುಂಟೆ ಮೂಜಗದಿ ||೮||**

ಸನತ್ಕುಮಾರ_ಪ್ರಭೋ! "ಏಕಶ್ಚಂದ್ರಸ್ತಮೋ ಹಂತಿ ನ ಚ ತಾರಾ ಗಣೋಪಿ ಚ"ಎಂಬಂತೆ ಲೋಕದಲ್ಲಿ ಧರ್ಮದ್ರೋಹಿಗಳಾಗಿ ಭೂಭಾರಕರಾದ ಹಲವು ಮಕ್ಕಳನ್ನು ಪಡೆದು ಏನು ಪುರುಷಾರ್ಥ?ಕುಲದೀಪಕನಾದ ಅರ್ಜುನನಂತಹ ಸುಪುತ್ರನು ಓರ್ವನಿದ್ದರೆ ಸಾಲದೆ?ವೀರಾಗ್ರೇಸರನಾದ ಆತನಿದಿರಿಗೆ ನಿಲ್ಲತಕ್ಕ ಸಮರ್ಥ ಪುರುಷರು ತ್ರಿಭುವನದಲ್ಲಿ ಯಾರಿದ್ದಾರೆ, ಹೇಳು?

ಧೃತರಾಷ್ಟ್ರ_ಸ್ವಾಮಿ!ತಮ್ಮ ವಾಕ್ಯವನ್ನೇ ವೇದವಾಕ್ಯವೆಂದು ಭಾವಿಸುತ್ತೇನೆ. ಈ ಕಾರಣಗಳಿಂದ ನನ್ನ ಮಕ್ಕಳು ಯಾವ ವಿಧದಲ್ಲಿ ಜೀವಿಸಿಕೊಂಡಿದ್ದಾರು ಎಂದು ಚಿಂತಿಸುತ್ತಿದ್ದೇನೆ, ಜೀಯ!

ಸನತ್ಕುಮಾರ_ರಾಜ! ಆ ವಿಷಯದಲ್ಲಿ ಕೇಳು.

**ಇನ್ನಾದರೊಮ್ಮೆ ನಿನ್ನಣುಗರ್ಗೆ ಬುದ್ಧಿಯ| ಚೆನ್ನಾಗಿ ತಿಳುಹಿ ಧರ್ಮಜನ|| ಮನ್ನಿಸಿ ಕೃಷ್ಣನ ಮರೆಗೊಂಡು ಬದುಕುವು| ದನ್ಯೋನ್ಯವೆಂದನಾ ಮುನಿಪ ||೯||**

ಸನತ್ಕುಮಾರ_ಪ್ರಭೋ! ನೀನು ನಿನ್ನ ಮಕ್ಕಳಿಗೆ ಇನ್ನಾದರೂ ಒಂದಾವರ್ತಿ ಸರಿಯಾದ ಬುದ್ಧಿಯನ್ನು ಹೇಳಿ, ರಾಜ್ಯಾಂಶವನ್ನು ಕೊಟ್ಟು ಧರ್ಮವನ್ನು ಮನ್ನಿಸಿ, ಶ್ರೀಕೃಷ್ಣನ ಆಶ್ರಯವನ್ನು ಪಡೆದು ಸುರಕ್ಷಿತವಾಗಿ ಬದುಕುವಂತೆ ಮಾಡುವುದು ಲೇಸು.

ಧೃತರಾಷ್ಟ್ರ_ಸ್ವಾಮಿ! ತಮ್ಮ ಅಪ್ಪಣೆಯನ್ನೇ ಶಿರಸಾವಹಿಸುತ್ತೇನೆ.

**ಭಾಮಿನೀ**

**ಇನಿತು ನಾನಾವಿಧದ ಬೋಧೆಗ| ಳನು ಧರಾಧಿಪಗೊಲಿದು ಪೇಳ್ದಿರ| ಲನಿತರಲಿ ದಿನಮಣಿ ಯುದಯಿಸಲು ನೃಪನ ಸಂತಯ್ಸಿ||**

ಸನತ್ಕುಮಾರ_ರಾಜ! "ಕಾಲಸ್ಯ ಕುಟಿಲಾ ಗತಿಃ" ಎಂಬಂತೆ, ಯಾವ ಯಾವ ಕಾಲಕ್ಕೆ ಯಾರ್‍ಯಾರಿಂದ ಏನೇನೆಲ್ಲ ಆಗಲಿಕ್ಕಿದೆಯೋ, ಹಾಗೆಯೆ ಆಗಿಹೋಗುತ್ತದೆ. ಆದರೂ ನಿನ್ನಿಂದಾದಷ್ಟು ಪ್ರಯತ್ನವನ್ನು ಮಾಡಿ ನೋಡು. ಸೂರ್ಯನು ಉದಯಾದ್ರಿಯನ್ನಡರಿದನು, ಕೇಳು.

**ಮುನಿಪ ತನ್ನಾಶ್ರಮಕೆ ತೆರಳಲು| ಜನಪನಿತ್ತಲು ನಂದನರ ದು| ರ್ಗುಣಗಳನು ನೆನೆನೆನೆದು ಚಿಂತಿಸುತಿರ್ದ ದುಗುಡದಲಿ||೧||**

ಸನತ್ಕುಮಾರ–ಪ್ರಭೋ! ಆಪತ್ಕಾಲಕ್ಕೆ ಅತಿ ಧೈರ್ಯವೇ ಪ್ರಧಾನವಾದುದರಿಂದ ಶೋಕಿಸಿ ಪ್ರಯೋಜನವಿಲ್ಲ ಧೈರ್ಯಸ್ಥನಾಗು. ನಾನಾದರೋ ತೆರಳುತ್ತೇನೆ.

ಧೃತರಾಷ್ಟ್ರ–ಅಪ್ಪಣೆ, ಸ್ವಾಮಿ! (ಆತ್ಮಗತಂ) ಆಹಾ! ನನ್ನ ಮಕ್ಕಳ ದುರ್ಗುಣಗಳಿಂದ ನನ್ನ ಬಾಳುವೆಯೇ ವ್ಯರ್ಥವಾಗಿ ಹೋಯಿತಲ್ಲ!



## ನಾಡಿಗೆ ನಮಸ್ಕಾರ ಮೊದಲ ಕಂತಿನ ಹತ್ತು ಹೊತ್ತಗೆಗಳು

1. ಪದ್ಮಭೂಷಣ ಡಾ. ವೀರೇಂದ್ರ ಹೆಗ್ಗಡೆಯವರು (ಲೇ:ಡಾ.ಬಿ.ಪಿ. ಸಂಪತ್‌ಕುಮಾರ್, ಉಜಿರೆ)
2. ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯ (ಲೇ: ಬೆಳಗೋಡು ರಮೇಶ ಭಟ್)
3. ಸಂಶೋಧಕ ಮಹೋಪಾಧ್ಯಾಯ ಡಾ. ಉಳಿಯಾರು ಪದ್ಮನಾಭ ಉಪಾಧ್ಯಾಯ (ಲೇ: ಎಸ್.ಆರ್. ಅರುಣಕುಮಾರ್)
4. ಹಿರಿಯ ಸಾಹಿತಿ ಜನಾರ್ದನ ಗುರ್ಕಾರ್ (ಲೇ: ಡಾ. ಬಿ. ಜನಾರ್ದನ ಭಟ್)
5. ಮಹಾಕವಿ ಮಂದಾರ ಕೇಶವ ಭಟ್ಟ (ಲೇ: ಡಾ. ನಿಕೇತನ)
6. ಮೃಗಯಾ ಸಾಹಿತಿ ಕೆದಂಬಾಡಿ ಜತ್ತಪ್ಪ ರೈ (ಲೇ: ವಿ.ಗ. ನಾಯಕ)
7. ಅಭಿನವ ಧನ್ವಂತರಿ ಡಾ. ಮುಳಿಯ ಗೋಪಾಲಕೃಷ್ಣ ರಾಯರು (ಲೇ: ಜನಾರ್ದನ ಗುರ್ಕಾರ್)
8. ರಂಗಕರ್ಮಿ ಸದಾನಂದ ಸುವರ್ಣ (ಲೇ: ಡಾ. ಸೀತಾಲಕ್ಷ್ಮೀ ಕರ್ಕಿಕೋಡಿ)
9. ಸಸ್ಯವಿಜ್ಞಾನಿ ಡಾ. ಪಳ್ಳತ್ತಡ್ಕ ಕೇಶವ ಭಟ್ಟ (ಲೇ: ಡಾ. ವಸಂತಕುಮಾರ ಪೆರ್ಲ)
10. ಕರ್ನಾಟಕದ ಹಾನಿಮನ್ ಡಾ. ಕೆ. ವಸಂತಕುಮಾರ್ ರಾವ್, (ಲೇ: ಡಾ.ವಿಶ್ವೇಶ್ವರ ವಿ.ಕೆ.)

## ಎರಡನೇ ಕಂತಿನ ಹತ್ತು ಹೊತ್ತಗೆಗಳು

11. ಸಮಾಜಸೇವೆಗೆ ಪರ್ಯಾಯ ಹೆಸರು ಧರ್ಮದರ್ಶಿ ಹರಿಕೃಷ್ಣ ಪುನರೂರು (ಲೇ: ಜಯರಾಮ ಕಾರಂತ, ಕಾಂತಾವರ)
12. ಪತ್ರಕರ್ತರ ಆಚಾರ್ಯ ಪಾಡಿಗಾರು ವೆಂಕಟ್ರಮಣ ಆಚಾರ್ಯ (ಲೇ: ಡಾ. ಶ್ರೀನಿವಾಸ ಹಾವನೂರ)
13. ಹಿರಿಯ ಜಾನಪದ ವಿದ್ವಾಂಸ ಡಾ. ಅಮೃತ ಸೋಮೇಶ್ವರ (ಲೇ: ಡಾ.ನಾ. ದಾಮೋದರ ಶೆಟ್ಟಿ)
14. ತುಳು ಭಾಷಾ ಸಾಹಿತ್ಯದ ರನ್ನ ದರ್ಬೆ ಕೃಷ್ಣಾನಂದ ಚೌಟ (ಲೇ: ಡಾ. ವಾಮನ ನಂದಾವರ)
15. ನೈತಿಕ ಶಿಕ್ಷಣದ ಚಿಂತಕ ಉ.ಕ. ಸುಬ್ಬರಾಯಾಚಾರ್ಯ (ಲೇ: ಬೈಕಾಡಿ ಜನಾರ್ದನ ಆಚಾರ್)
16. ಪುಸ್ತಕ ಪ್ರೀತಿಗೆ ರೂಪಕ ಬೋಳಂತಕೋಡಿ ಈಶ್ವರ ಭಟ್ಟ (ಲೇ: ಪ್ರೊ. ವಿ.ಬಿ. ಅರ್ತಿಕಜೆ)
17. ಮಿಂಚುವ ಮಾತಿನ ಯಕ್ಷ ಕುಂಬಳೆ ಸುಂದರ ರಾವ್ (ಲೇ: ಗಣರಾಜ ಕುಂಬ್ಳೆ)
18. ಒಂದಾಣೆ ಮಾಲೆಯ ಸಾಹಸಿ ಕುಡ್ವಿ ವಾಸುದೇವ ಶೆಣೈ (ಲೇ: ಡಾ. ಸಬಿಹಾ ಭೂಮಿಗೌಡ)
19. ಮಕ್ಕಳ ಸಾಹಿತ್ಯದ ಹಿರಿಯ ಪಳಕಳ ಸೀತಾರಾಮ ಭಟ್ಟ (ಲೇ: ನೆಂಪು ನರಸಿಂಹ ಭಟ್ಟ)
20. ಬಹುಮುಖ ಪ್ರತಿಭಾಸಂಪನ್ನ ಡಾ.ಎಂ.ಮೋಹನ ಆಳ್ವ (ಲೇ: ಡಾ. ನರೇಂದ್ರ ರೈ ದೇರ್ಲ)

## ಮೂರನೇ ಕಂತಿನ ಹತ್ತು ಹೊತ್ತಗೆಗಳು

21. ಕಾರಂತರ ಕನ್ನಡ ದೀಕ್ಷಾ ಗುರು ಐರೋಡಿ ಶಿವರಾಮಯ್ಯ (ಲೇ:ಎ. ಮಾಧವ ಉಡುಪ)
22. ಕರ್ನಾಟಕ ಏಕೀಕರಣದ ನೇತಾರ ಕೆ.ಬಿ. ಜಿನರಾಜ ಹೆಗ್ಡೆ (ಲೇ: ಬಿ. ಸೀತಾರಾಮ ಭಟ್)
23. ಹಿರಿಯ ಸಹಕಾರಿ ಮೊಳಹಳ್ಳಿ ಶಿವರಾಯ (ಲೇ: ಡಾ. ಗಣನಾಥ ಎಕ್ಕಾರು)
24. ಬೆಳಕಿನ ಬೀಜ ಪಾಂಡೇಶ್ವರ ಗಣಪತಿ ರಾವ್ (ಲೇ: ಡಾ. ಬೇ.ಸೀ. ಗೋಪಾಲಕೃಷ್ಣ)
25. ಹಿರಿಯ ಕವಿ ಅ.ಗೌ. ಕಿನ್ನಿಗೋಳಿ (ಲೇ: ಡಾ. ಕೆ. ಚಿನ್ನಪ್ಪ ಗೌಡ)
26. ಸಂಗೀತ ವಿದ್ವಾಂಸ ಚಕ್ರಕೋಡಿ ನಾರಾಯಣ ಶಾಸ್ತ್ರಿ (ಲೇ: ಡಾ. ಎಸ್.ಆರ್. ವಿಘ್ನರಾಜ)
27. ಸಾಂಸ್ಕೃತಿಕ ರಾಯಭಾರಿ ಕು. ಶಿ. ಹರಿದಾಸ ಭಟ್ಟ (ಲೇ: ಡಾ. ಎನ್.ಟಿ. ಭಟ್)
28. ಬಹುಮುಖಿ ಸಾಹಿತಿ ವಿಶುಕುಮಾರ್ (ಲೇ: ಅರವಿಂದ ಕರ್ಕಿಕೋಡಿ)
29. ಜನರ ನಡುವಿನ ನ್ಯಾಯಾಧೀಶ ಡಾ. ಶಂಕರ ಖಂಡೇರಿ (ಲೇ: ಎಸ್.ಜಿ. ಕೃಷ್ಣ)

30. ಸಮಾಜಮುಖಿ ಸಂಶೋಧಕಿ ಡಾ. ಸುಶೀಲಾ ಪದ್ಮನಾಭ ಉಪಾಧ್ಯಾಯ (ಲೇ: ಎಂ.ಜಾನಕಿ ಬ್ರಹ್ಮಾವರ)

### ನಾಲ್ಕನೇ ಕಂತಿನ ಹತ್ತು ಹೊತ್ತಗೆಗಳು

31. ಸಾಂಸ್ಕೃತಿಕ ಚಿಂತಕ ಕೆ.ಎಸ್.ಎನ್. ಅಡಿಗ (ಲೇ: ಶ್ರೀನಿವಾಸ ದೇಶಪಾಂಡೆ)
32. ಸಮಾಜಮುಖಿ ಯೋಜಕ ಕೆ.ಕೆ. ಪೈ (ಲೇ: ಕೆ. ಶಾರದಾ ಭಟ್)
33. ರಾಜನೀತಿಯ ಅಪರಂಜಿ ಡಾ. ಎ. ಸುಬ್ಬರಾವ್ (ಲೇ: ಅಡ್ಡೂರು ಕೃಷ್ಣರಾವ್)
34. ಕನ್ನಡ ಸೇನಾನಿ ಪಿ.ಕೆ. ನಾರಾಯಣ (ಲೇ: ಡಾ. ವರದಾ ಶ್ರೀನಿವಾಸ್)
35. ಮೌಲ್ಯಾಧಾರಿತ ರಾಜಕಾರಣಿ ಉಳ್ಳಾಲ ಶ್ರೀನಿವಾಸ ಮಲ್ಯ (ಲೇ: ಬಸ್ತಿ ವಾಮನ ಶೆಣೈ)
36. ವರ್ಣಚಿತ್ರ ಕಲಾವಿದ ಪಾವಂಜೆ ಗೋಪಾಲಕೃಷ್ಣಯ್ಯ (ಲೇ: ಶ್ರೀಮತಿ ಬಿ.ಎಂ. ರೋಹಿಣಿ)
37. ಕನ್ನಡದ ಕಟ್ಟಾಳು ಬಿ.ಎಂ. ಇದಿನಬ್ಬ (ಲೇ: ವಿ.ಗ. ನಾಯಕ)
38. ದೂರಸಂಪರ್ಕವನ್ನು ಸಮೀಪವಾಗಿಸಿದ ಅಧಿಕಾರಿ ಕಜಂಪಾಡಿ ರಾಮ (ಲೇ: ಧನಂಜಯ ಕುಂಬ್ಳೆ)
39. ಹಿರಿಯ ಸಾಹಿತಿ ಫ್ರಾನ್ಸಿಸ್ ದಾಂತಿ (ಲೇ: ಸುಮುಖಾನಂದ ಜಲವಳ್ಳಿ)
40. ಜಾನಪದ ವಿದ್ವಾಂಸ ಬನ್ನಂಜೆ ಬಾಬು ಅಮೀನ್ (ಲೇ: ಡಾ. ಗಣನಾಥ ಎಕ್ಕಾರು)

### ಐದನೇ ಕಂತಿನ ಹತ್ತು ಹೊತ್ತಗೆಗಳು

41. ಅನಂತಮುಖದ ಚೈತನ್ಯ ಟಿ.ಎ. ಪೈ (ಲೇ: ಕೆ.ಎಂ. ಉಡುಪ, ಮಣಿಪಾಲ)
42. ನ್ಯಾಯ ನಿಷ್ಠುರದ ನ್ಯಾಯಾಧೀಶ ಕೆ.ಎಸ್. ಹೆಗ್ಡೆ (ಲೇ: ಶ್ರೀ ಮುದ್ರಾಡಿ, ನಿಟ್ಟೆ)
43. ಗ್ರಾಮ ಸಬಲೀಕರಣ ಹರಿಕಾರ ಕೆ.ಎಂ. ಉಡುಪ (ಲೇ: ಬೆಳಗೋಡು ರಮೇಶ ಭಟ್ಟ,ಚೆನ್ನೈ)
44. ನಿಷ್ಠುರ ವಿದ್ವಾಂಸ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ (ಲೇ: ನಂದಳಿಕೆ ಬಾಲಚಂದ್ರ ರಾವ್)
45. ಚೇರ್ಕಾಡಿಯ ಗಾಂಧಿ ರಾಮಚಂದ್ರ ರಾವ್ ಚೇರ್ಕಾಡಿ(ಲೇ:ಆರೂರು ಮಂಜುನಾಥ ರಾವ್)
46. ಕೃಷಿಋಷಿ ಡಾ. ಎಲ್.ಸಿ. ಸೋನ್ಸ್ (ಲೇ: ಶೇಖರ ಅಜೆಕಾರ್)
47. ದಾಸರ ದಾಸ ಭದ್ರಗಿರಿ ಅಚ್ಯುತದಾಸ (ಲೇ: ಡಾ. ಕಬ್ಬಿನಾಲೆ ವಸಂತಭಾರದ್ವಾಜ್)
48. ಕೊಡಗನ್ನು ಉಳಿಸಿದ ಕಲಾವಿದ ಎನ್.ಎಸ್.ದೇವಿಪ್ರಸಾದ್ ಸಂಪಾಜೆ (ಲೇ:ಪ್ರೊ. ಪ್ರಭಾಕರ ಶಿಶಿಲ)
49. ಸ್ತ್ರೀಪರ ಚಿಂತಕಿ ಪಂಡಿತ ರಮಾಬಾಯಿ ಸರಸ್ವತಿ (ಲೇ: ಸೀತಾ ಬಾಪಟ್)
50. ಚಂದಮಾಮದ ನವಗಿರಿನಂದ (ಲೇ: ಶೇಷನಾರಾಯಣ)

### ಆರನೇ ಕಂತಿನ ಹತ್ತು ಹೊತ್ತಗೆಗಳು

51. ಕಡಲ ತಡಿಯ ಭಾರ್ಗವ ಕೋಟ ಶಿವರಾಮ ಕಾರಂತ (ಲೇ: ಕೋಣಿ ಶಿವಾನಂದ ಕಾರಂತ)
52. ನಾಡೋಜ ಮುಳಿಯ ತಿಮ್ಮಪ್ಪಯ್ಯ (ಲೇ: ಮುಳಿಯ ರಾಘವಯ್ಯ)
53. ಮಣಿಪಾಲದ ರೂವಾರಿ ಡಾ. ಟಿ.ಎಂ.ಎ. ಪೈ (ಲೇ: ಡಾ. ಮಹಾಬಲೇಶ್ವರ ರಾವ್)
54. ಅಭಿವೃದ್ಧಿಯ ಹರಿಕಾರ ಟಿ. ಉಪೇಂದ್ರ ಪೈ (ಲೇ: ಅಂಶುಮಾಲಿ)
55. ನವೋದಯದ ರಾಜಹಂಸ ಸಾಂತ್ಯಾರು ವೆಂಕಟರಾಜ (ಲೇ: ಡಾ. ಬಿ. ಜನಾರ್ದನ ಭಟ್)
56. ಅನನ್ಯ ಶಿಕ್ಷಣತಜ್ಞ ಡಾ. ಎಚ್. ಶಾಂತಾರಾಮ್ (ಲೇ: ಜಿ.ಪಿ. ರಾವ್, ಉಡುಪಿ
57. ಯಕ್ಷ ಗಂಧರ್ವ ಹಾರಾಡಿ ರಾಮ ಗಾಣಿಗ (ಲೇ: ಕಂದಾವರ ರಘುರಾಮ ಶೆಟ್ಟಿ)
58. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಡಾ. ಅಮ್ಮೆಂಬಳ ಬಾಳಪ್ಪ (ಲೇ: ಡಾ. ದುಗ್ಗಪ್ಪ ಕಜೆಕಾರ್)
59. ಶಿಲ್ಪಕಲಾ ಕೋವಿದ ಕೆ. ಶ್ಯಾಮರಾಯ ಆಚಾರ್ಯ (ಲೇ: ಪ್ರೊ. ಪ್ರಭಾಕರ ಆಚಾರ್ಯ)
60. ಅಪರೂಪದ ಸಮಾಜಸೇವಕ ಹರೇಕಳ ಹಾಜಬ್ಬ (ಲೇ: ಇಸ್ಮತ್ ಪಜೀರ್)

### ಏಳನೇ ಕಂತಿನ ಹದಿನೈದು ಹೊತ್ತಗೆಗಳು

61. ರಾಷ್ಟ್ರಕವಿ ಎಂ. ಗೋವಿಂದ ಪೈ (ಲೇ: ವಿ.ಗ. ನಾಯಕ)
62. ಹೋರಾಟಗಾರ್ತಿ ಕಮಲಾದೇವಿ ಚಟ್ಟೋಪಾಧ್ಯಾಯ (ಲೇ: ಡಾ. ಸೀತಾಲಕ್ಷ್ಮೀ ಕರ್ಕಿಕೋಡಿ)
63. ತ್ಯಾಗಜೀವಿ ಕಾರ್ನಾಡು ಸದಾಶಿವ ರಾವ್ (ಲೇ: ಯಶೋಧರ್ ಪಿ. ಕರ್ಕೇರ)
64. ನವೋದಯದ ಕೋಗಿಲೆ ಕಡೆಂಗೋಡ್ಲು ಶಂಕರ ಭಟ್ಟ (ಲೇ: ಪ್ರೊ. ಎ.ವಿ.ನಾವಡ)
65. ಸವಿಗನ್ನಡದ ಗಾರುಡಿಗ ಕೊಳಂಬೆ ಪುಟ್ಟಣ ಗೌಡ (ಲೇ: ಶೀಲಾವತಿ ಕೊಳಂಬೆ)
66. ನಿಘಂಟುತಜ್ಞ ಪ್ರೊ. ಮುಂಗ್ಲಿಮನೆ ಮರಿಯಪ್ಪ ಭಟ್ಟ (ಲೇ: ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ)
67. ಐಕ್ಯಗಾನದ ನಾಡೋಜ ಕಯ್ಯಾರ ಕಿಞ್ಞಣ್ಣ ರೈ (ಲೇ: ಡಾ. ನರೇಂದ್ರ ರೈ ದೇರ್ಲ)
68. ನವ್ಯ ಕಾವ್ಯದ ಪ್ರವರ್ತಕ ಮುಗೇರಿ ಗೋಪಾಲಕೃಷ್ಣ ಅಡಿಗ (ಲೇ: ಬಿ.ವಿ. ಕೆದಿಲಾಯ)
69. ದೇಶಭಕ್ತ ಎನ್.ಎಸ್. ಕಿಲ್ಲೆ (ಲೇ: ಎನ್.ಪಿ. ಕಿಲ್ಲೆ)
70. 'ಶಿಂಗಣ್ಣಾ' ಖ್ಯಾತಿಯ ಕೆ. ರಾಮಕೃಷ್ಣ (ಲೇ: ಮನೋರಮಾ ಎಂ. ಭಟ್)
71. ಸಾಹಿತ್ಯೋಪಾಸಕ ಬೈಕಾಡಿ ವೆಂಕಟಕೃಷ್ಣ ರಾವ್ (ಲೇ: ಡಾ. ಮಹಾಬಲೇಶ್ವರ ರಾವ್)
72. ಪದ್ಮಭೂಷಣ ಡಾ. ಬಿ.ಎಂ. ಹೆಗ್ಡೆ (ಲೇ: ಅಡ್ಡೂರು ಕೃಷ್ಣ ರಾವ್)
73. ಸಮಾಜಮುಖಿ ಚಿಂತಕ ಡಾ. ಏರ್ಯ ಲಕ್ಷ್ಮೀನಾರಾಯಣ ಆಳ್ವ (ಲೇ: ಡಾ. ಪಾದೇಕಲ್ಲು ವಿಷ್ಣು ಭಟ್ಟ)
74. ಯಕ್ಷ ಕಿನ್ನರ ಐರೋಡಿ ಗೋವಿಂದಪ್ಪ (ಲೇ: ನರೇಂದ್ರ ಕುಮಾರ್ ಕೋಟ)
75. ಕಲಾಕೋವಿದ ಮೋಹನ ಸೋನಾ (ಲೇ: ಮೌಲ್ಯ ಜೀವನರಾಂ)

### ಎಂಟನೇ ಕಂತಿನ ಹನ್ನೆರಡು ಹೊತ್ತಗೆಗಳು

76. ನವೋದಯ ಕಾವ್ಯದ ಶಕಪುರುಷ ಪಂಜೆ ಮಂಗೇಶರಾಯರು(ಲೇ:ಡಾ. ವಾಮನ ನಂದಾವರ)
77. ಪಂಪ ಪ್ರಶಸ್ತಿ ಪುರಸ್ಕೃತ ವಿದ್ವಾಂಸ ಸೇಡಿಯಾಪು ಕೃಷ್ಣ ಭಟ್ಟ (ಲೇ: ಪಿ.ಎನ್. ಅಂಬಿಕಾ)
78. ನವೋದಯದ ಕವಿಪುಂಗವ ಅಮ್ಮೆಂಬಳ ಶಂಕರ ನಾರಾಯಣ ನಾವಡ (ಲೇ: ವಿ.ಗ. ನಾಯಕ)
79. ವಾಸ್ತವವಾದಿ ಕಾದಂಬರಿಕಾರ ವ್ಯಾಸರಾಯ ಬಲ್ಲಾಳ (ಲೇ: ಡಾ. ಜಿ.ಎನ್. ಉಪಾಧ್ಯ)
80. ಕಾಸರಗೋಡಿನ ಕಣ್ಮಣಿ ಕಳ್ಳಿಗೆ ಮಹಾಬಲ ಭಂಡಾರಿ (ಲೇ: ಡಾ. ಪಿ.ಶ್ರೀಕೃಷ್ಣ ಭಟ್)
81. ಬರಹಗಾರರ ಬಳಗದ ಬೆಳದಿಂಗಳು – ಚಂದ್ರರಾಜ ಶೆಟ್ಟಿ (ಲೇ: ಡಾ. ಎಸ್.ಪಿ. ಪದ್ಮಪ್ರಸಾದ್)
82. ಕನ್ನಡದ ಕಿಂಕರ ಕೀಕಾನ ರಾಮಚಂದ್ರ (ಲೇ: ಕಲ್ಲೂರು ನಾಗೇಶ)
83. ಪಂಡಿತ ಪೆರ್ಲ ಕೃಷ್ಣ ಭಟ್ಟ (ಲೇ: ಡಾ. ಎಂ.ಪ್ರಭಾಕರ ಜೋಶಿ)
84. ಭಾಷಾವಿಜ್ಞಾನಿ ಪ್ರೊ. ಕೋಡಿ ಕುಶಾಲಪ್ಪ ಗೌಡ (ಲೇ: ಡಾ. ಶಿವಕುಮಾರ ಭರಣ್ಯ)
85. ಅಪೂರ್ವ ಪತ್ರಕರ್ತ ಎಂ.ವಿ. ಕಾಮತ್ (ಲೇ: ಅಂಶುಮಾಲಿ)
86. ರಂಗಸ್ಥಳದ ಬೆಳಕು ಡಾ.ಕೋಳ್ಯೂರು ರಾಮಚಂದ್ರ ರಾವ್ (ಲೇ:ಡಾ.ಕೆ.ಎಂ.ರಾಘವ ನಂಬಿಯಾರ್)
87. ಅಪರೂಪದ ಸಮಾಜಸೇವಕ ಪಿ. ರವೀಂದ್ರ ನಾಯಕ್ (ಲೇ: ಕೆ. ತಾರಾ ಭಟ್)

### ಒಂಬತ್ತನೇ ಕಂತಿನ ಹದಿಮೂರು ಹೊತ್ತಗೆಗಳು

88. ವಿದ್ವತ್ತಿಗೆ ರೂಪಕ ಕಡವ ಶಂಭುಶರ್ಮ (ಲೇ: ಡಾ. ಶ್ರೀಧರ ಹೆಚ್.ಜಿ.)
89. ಕನೀಯಕವಿ ಪ್ರೊ. ಟಿ.ಕೇಶವ ಭಟ್ಟ (ಲೇ: ಡಾ.ತಾಳ್ತಜೆ ವಸಂತಕುಮಾರ)
90. ಸಮಾನತೆಯ ಸಂತ ಬಿ.ವಿ. ಕಕ್ಕಿಲ್ಲಾಯ (ಲೇ: ಡಾ. ನಿತ್ಯಾನಂದ ಬಿ. ಶೆಟ್ಟಿ)
91. ವಾಸ್ತವವಾದದ ಸಾಹಿತಿ ರಾಮಚಂದ್ರ ಉಚ್ಚಿಲ (ಲೇ: ಶ್ಯಾಮಲಾ ಮಾಧವ)

92. ಉದ್ಯಮರಂಗದ ಆದ್ಯಪ್ರವರ್ತಕ ಎ.ಎಸ್. ಕುಡ್ವ (ಲೇ: ಬಿ. ಸೀತಾರಾಮ ಭಟ್)
93. ಮಾತಿನ ಮಹಾಕವಿ ಶೇಣಿ ಗೋಪಾಲಕೃಷ್ಣ ಭಟ್ಟ (ಲೇ: ಮೂಡಂಬೈಲು ಸಿ. ಗೋಪಾಲಕೃಷ್ಣ ಶಾಸ್ತ್ರಿ)
94. ಸಾಧನೆಯ ಬೆಳಕು ನಾವರಿಯದ ದೇರಾಜೆ (ಲೇ: ಪ್ರಸಾದ ರಕ್ಷಿದಿ)
95. ಜೇನುಕೃಷಿ ತಜ್ಞ–ಹವ್ಯಾಸಗಳ ಹರಿಕಾರ ಪೈಲೂರು ಲಕ್ಷ್ಮೀನಾರಾಯಣ ರಾವ್ (ಲೇ:ಜಿ.ಎಸ್. ಉಬರಡ್ಕ)
96. ಜಾದೂಲೋಕದ ಮಾಂತ್ರಿಕ ಪ್ರೊ. ಶಂಕರ್ (ಲೇ: ಪ. ರಾಮಕೃಷ್ಣ ಶಾಸ್ತ್ರಿ)
97. ಕೋಶ ಸಾಮ್ರಾಜ್ಯದ ಈಶ ಯಜ್ಞನಾರಾಯಣ ಉಡುಪ (ಲೇ: ನಾರಾಯಣಿ ದಾಮೋದರ್)
98. ಕಲಾಲೋಕದ ಚಿಂತಕ ಎ. ಈಶ್ವರಯ್ಯ (ಲೇ: ನಿತ್ಯಾನಂದ ಪಡ್ರೆ)
99. ಶಿಕ್ಷಣ ಸಿದ್ಧಾಂತಿ ಡಾ. ಎನ್. ಸುಕುಮಾರ ಗೌಡ (ಲೇ: ಕೆ.ಆರ್. ವಿದ್ಯಾಧರ)
100. ಸಂಸ್ಕೃತಿ ಪ್ರೀತಿಯ ಕುಂಭ ಬಾಬು ಶಿವ ಪೂಜಾರಿ (ಲೇ: ವಿ.ಗ.ನಾಯಕ)

### ಹತ್ತನೇ ಕಂತಿನ ಒಂಬತ್ತು ಹೊತ್ತಗೆಗಳು

101. ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಗಾಂಧೀವಾದಿ ಬಂಟಕಲ್ಲು ಲಕ್ಷ್ಮೀನಾರಾಯಣ ಶರ್ಮ (ಲೇ: ಬಿ. ಸೀತಾರಾಮ ಭಟ್)
102. ಯಕ್ಷಗಾನ ಆಚಾರ್ಯ ಅರ್ಕುಳ ಸುಬ್ರಾಯ ಆಚಾರ್ಯ (ಲೇ:ಕೆ.ಉಮೇಶ ಆಚಾರ್ಯ ಗೇರುಕಟ್ಟೆ)
103. ಬಹುಮುಖಿ ಪ್ರತಿಭೆಯ ಭೀಷ್ಮ ತುದಿಯಡ್ಕ ವಿಷ್ಣ್ವಯ್ಯ (ಲೇ:ಸರೋಜಿನಿ ನಾಗಪ್ಪಯ್ಯ ಕಾಂತಾವರ)
104. ಧಾರವಾಡದಲ್ಲರಳಿದ ಮಂಗಳೂರು ಮಲ್ಲಿಗೆ ಗೀತಾ ಕುಲಕರ್ಣಿ (ಲೇ: ರಂಜನಾ ನಾಯಕ)
105. ಕಾಸರಗೋಡಿನ ಶ್ರೀಗಂಧ ಬೇವಿಂಜೆ ಶ್ರೀಧರ ಕಕ್ಕಿಲ್ಲಾಯ (ಲೇ: ಶ್ಯಾಮಲಾಕುಮಾರಿ ಬೇವಿಂಜೆ)
106. ಯಕ್ಷಕಲಾ ಕಲ್ಪ ಕುರಿಯ ವಿಠಲ ಶಾಸ್ತ್ರಿ (ಲೇ: ಸೇರಾಜೆ ಗೋಪಾಲಕೃಷ್ಣ ಭಟ್ಟ)
107. ತುಳುವ ಕಲಾತಿಲಕ ಪಿ.ಎನ್. ಆಚಾರ್ಯ (ಲೇ: ಶೇಖರ ಅಜೆಕಾರು)
108. ಗಡಿನಾಡಿನ ಬಾನಾಡಿ ಪ್ರತಿಭೆ ಕೆ.ವಿ.ತಿರುಮಲೇಶ್ (ಲೇ: ಡಾ. ಮಹೇಶ್ವರಿ ಯು.)
109. ವಿಜಯಾ ಬ್ಯಾಂಕಿನ ವಿಜಯಶಿಲ್ಪಿ ಸುಂದರರಾಮ ಶೆಟ್ಟಿ (ಲೇ: ಎನ್.ಪಿ. ಶೆಟ್ಟಿ)



ಅರ್ಕುಳ ಸುಬ್ರಾಯ ಆಚಾರ್ಯರ ಕುರಿತಾದ ಈ ಕಿರು ಹೊತ್ತಗೆಯನ್ನು ಬರೆದಿರುವ ಕೆ. ಉಮೇಶ ಆಚಾರ್ಯ ಗೇರುಕಟ್ಟೆ (ಜನನ ೧೯೫೨) ಇವರು ಸಾರ್ವಜನಿಕ ಶಿಕ್ಷಣ ಇಲಾಖೆಯ ಮಂಗಳೂರು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಪತ್ರಾಂಕಿತ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸಿ ಈಗ ನಿವೃತ್ತರು. ರಾಜ್ಯಶಾಸ್ತ್ರದಲ್ಲಿ ಎಂ.ಎ. ಪದವೀಧರರಾದ ಇವರು ಲಿಪಿಕ ನೌಕರರ ಸಂಘದ ರಾಜ್ಯ ಪ್ರಶಸ್ತಿ (೧೯೯೨), ದಕ್ಷಿಣಕನ್ನಡ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ (೨೦೦೩), ಜಿಲ್ಲಾಧಿಕಾರಿಗಳಿಂದ ಉತ್ತಮ ಅಧಿಕಾರಿ ಪ್ರಶಸ್ತಿ (೨೦೦೩) ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ನಿವೃತ್ತಿಯ ನಂತರವೂ ಇಲಾಖಾ ನಿಯಮಗಳ ಕುರಿತಾದ ತನ್ನ ಅಪಾರ ಜ್ಞಾನವನ್ನು ಇತರರಿಗೆ ತರಬೇತಿ ನೀಡುವ ಮೂಲಕ ಸಾರ್ಥಕ ಪಡಿಸಿಕೊಳ್ಳುತ್ತಿದ್ದಾರೆ.

ಕೆ. ಉಮೇಶ ಆಚಾರ್ಯರು ಯಕ್ಷಗಾನ ಕಲೆಯ ಆರಾಧಕರಾಗಿ ಮಾಡಿರುವ ಕೆಲಸ ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ದಾಖಲಾಗಬೇಕಾದುದು. ಮಂಗಳೂರು ಆಕಾಶವಾಣಿಯ ಬಿ.ಹೈ ಗ್ರೇಡ್ ಕಲಾವಿದರಾದ ಅವರು ಈ ಕ್ಷೇತ್ರದ ಒಳಹೊರಗುಗಳನ್ನು ಬಲ್ಲವರು; ಹಾಗೂ ಮಾಹಿತಿಗಳನ್ನು ನೀಡಬಲ್ಲವರು. ಅರ್ಕುಳ ಸುಬ್ರಾಯಾಚಾರ್ಯರ ಜನ್ಮಶತಮಾನೋತ್ಸವ ಹಾಗೂ 'ಸ್ವರ್ಣಕಮಲ' ಅಭಿನಂದನ ಗ್ರಂಥ ಸಮರ್ಪಣೆಯಲ್ಲಿಯೂ ಇವರ ಸಹಯೋಗವಿತ್ತು. ಇವರೇ ಅರ್ಕುಳರ ಬಗ್ಗೆ ಈ ಕೃತಿಯನ್ನು ರಚಿಸಿಕೊಟ್ಟಿರುವುದರಿಂದ ಕೃತಿಗೆ ಒಂದು ಅಧಿಕೃತತೆ ಪ್ರಾಪ್ತವಾಗಿದೆ.

ಡಾ. ಬಿ. ಜನಾರ್ದನ ಭಟ್

ಕನ್ನಡ ಭವನ, ಕಾಂತಾವರ

